ಅಖಿಲಸೇವಾಗ್ರಂಥಮಾಲೆ ಪುಷ್ಪ ೪

# ಅಲರು

ಕಂಪಿನಲರ ತಂದೆ ನಿಂದು
ನಿನ್ನ ಅಡಿಯೊಳಿಡಲು ಎಂದು
ಮೂಸಿ ನೋದಬೇಕು ಎಂಬ ಭಾವ ಹುಟ್ಟಿತು.
ಭಾವ ಹುಟ್ಟಿ ಮೂಸಿ ಬಿಟ್ಟೆ
ಹಿಗ್ಗಿ ನಿನ್ನ ಅಡಿಯೊಳಿಟ್ಟೆ
ಗಮುಗಮುಗಮು ಒಳಗು ಹೊರಗು ಕಂಪು ಇಡುಗಿತು !

—ಅಂಬಿಕಾತನಯದತ್ತ

ಸಂಪಾದಕ : ಹೇಜಾವರ ಸದಾಶಿವರಾವ್

ಮಿತ್ರಮಂಡಲಿ
ಮಂಗಳೂರು

ಅಖಿಲಸೇವಾಗ್ರಂಥಮಾಲೆ ಪುಷ್ಪ ೪

# ಅಲರು

ಕಂಪಿನಲರ ತಂದೆ ನಿಂದು
ನಿನ್ನ ಅಡಿಯೊಳಿಡಲು ಎಂದು
ಮೂಸಿ ನೋಡಬೇಕು ಎಂಬ ಭಾವ ಹುಟ್ಟಿತು.
ಭಾವ ಹುಟ್ಟಿ ಮೂಸಿ ಬಿಟ್ಟೆ
ಹಿಗ್ಗಿ ನಿನ್ನ ಅಡಿಯೊಳಿಟ್ಟೆ
ಗಮುಗಮುಗಮು ಒಳಗು ಹೊರಗು ಕಂಪು ಇಡುಗಿತು !

—ಅಂಬಿಕಾತನಯದತ್ತ

ಸಂಪಾದಕ: ಪೇಜಾವರ ಸದಾಶಿವರಾವ್

ಮಿತ್ರಮಂಡಲಿ
ಮಂಗಳೂರು

# ಮುನ್ನುಡಿ

ವಿವಿಧ ಭೇದಗಳಿಂದ ಭಿನ್ನವಾಗಿರುವ ಕರ್ಣಾಟಕದೊಡನೆ ಸಾಹಿತ್ಯಸಂಬಂಧವನ್ನು ಬೆಳಸಿ ಕರ್ಣಾಟಕತ್ವವನ್ನು ಪ್ರಚಾರಪಡಿಸಬೇಕೆಂಬುದು ನಮ್ಮ ಬಯಕೆ. ಮೂಲೆ ಮೂಲೆಯಲ್ಲಿ ಅಡಗಿದ್ದ ಕವಿಗಳ ಕವನಗಳನ್ನು ಬೆಳಕಿಗೆ ತಂದು, ನಾಡದೇವಿಗೆ ಹಾಡಸೇವೆ ಮಾಡಿಸಬೇಕೆಂಬುದು ನಮ್ಮೆಲ್ಲರ ಆಶಯ. ಸಾಹಿತ್ಯ ಸರ್ವೇಶ್ವರನ ಪೂಜೆಗೆ ಇತರರು ಸುಗಂಧಮಯವಾದ ಪಾರಿಜಾತಾದಿಗಳನ್ನು ತಂದೊಡ್ಡುವಾಗ ನಾವು ಹಚ್ಚಗೆಯ ತುಳಸಿ ಬಿಲ್ವಪತ್ರೆಗಳನ್ನಾದರೂ ಅರ್ಪಿಸಬೇಕೆಂಬುದು ನಮ್ಮ ಆತುರ. ಹಿರಿಯರು—ಹೆಚ್ಚಾಗಿ ಕಿರಿಯರು—ನಮ್ಮ ಬಯಕೆಗೆ ಪ್ರೋತ್ಸಾಹವಿತ್ತು ಬೆನ್ನ ತಟ್ಟಿದುದರ ಫಲವಾಗಿ ಇಷ್ಟರಲ್ಲೇ ಮೂರು ಕವಿತಾಗುಚ್ಛಗಳನ್ನು ಕನ್ನಡಿಗರಿಗೆ ಅರ್ಪಿಸಿರುವೆವು. ಇದು ನಾಲ್ಕನೆಯದು.

ಜೀವನಕ್ಕೂ ಕಾವ್ಯಕ್ಕೂ ಅನ್ಯಾದೃಶವಾದ ಸಾದೃಶ್ಯವಿದೆ. ಜೀವನದ ಭವ್ಯತೆ ದಿವ್ಯತೆಗಳನ್ನು ಜನತೆಗೆ ತೋರಿಸಿಕೊಡಲು ಕಾವ್ಯವೇ ಕೈಗನ್ನಡಿ. ಹಿಂದಿನ ಜೀವನಕ್ಕೂ ಇಂದಿನ ಜೀವನಕ್ಕೂ ಇರುವ ಭೇದವನ್ನು ನೋಡಿ ಇಂದಿನ ಕವಿಗಳು ಇಂದಿನ ಜೀವನ ಧರ್ಮಕ್ಕೊಪ್ಪುವ ನೂತನಪಥದಲ್ಲಿ ಮುಂದುವರಿಯಲು ಯತ್ನಿಸುತ್ತಿದ್ದಾರೆ. ಛಂದಸ್ಸನ್ನು ಹೊಸರೂಪಕ್ಕೆ ಮಾರ್ಪಡಿಸಿಕೊಂಡು ನವಜೀವನದ ಸುಖದುಃಖಗಳನ್ನು ಯಥಾರ್ಥವಾಗಿ ಬಣ್ಣಿಸಲು ಹವಣಿಸುತಲಿದ್ದಾರೆ. ಹೊಸ ವಿಚಾರಗಳನ್ನು ಹೊಸ ಸಾಹಿತ್ಯದ ಮೂಲಕ ಜನತೆಗೆ ತಿಳಿಸಿ ವಿಚಾರಪಲ್ಲಟವನ್ನುಂಟುಮಾಡಲು ಸನ್ನದ್ಧರಾಗಿದ್ದಾರೆ. ಎಷ್ಟರಮಟ್ಟಿಗೆ ಈ ಧ್ಯೇಯದ ಸಾಫಲ್ಯವಾಯಿತೆಂಬುದು ಸಾಹಿತ್ಯಾಭಿಮಾನಿಗಳಿಗೇ ತಿಳಿದ ವಿಷಯ.

ಕವಿಯು ಪ್ರಕೃತಿ ಎಂಬ ಕಿನ್ನರಿಯನ್ನು ಸ್ಫೂರ್ತಿಯಿಂದಲೂ, ನವೀನತೆಯಿಂದಲೂ, ವಿವೇಕದಿಂದಲೂ ಬಾಜಿಸುತ್ತಲಿದ್ದಾನೆ. ಪ್ರಕೃತಿಯು ಕವಿಗೆ ಶಕ್ತಿಮುಖಿಯಾಗಿಯೂ, ಕವಿಯು ಪ್ರಕೃತಿಗೆ ಕಾಂತಿಪ್ರದನಾಗಿಯೂ ಇದ್ದು, ಇಬ್ಬರೂ ಛಾಯಾ ವ್ಯಕ್ತಿಸದೃಶರಾಗಿ ಅಭೇದ್ಯರಾಗಿದ್ದಾರೆ. ಎಷ್ಟರವರೆಗೆ ಪ್ರಕೃತಿದೇವಿಯು ಇರುವಳೋ ಅಷ್ಟರವರೆಗೆ ಕವಿಯೂ ಇರುವನು. ಚಿರಕಾಲ ಉಜ್ಜ್ವಲವಾಗಿರಲು ಅವನಿಗೆ ಮಾತ್ರ ಸಾಧ್ಯವು! ಅನಂತತೆಯುಳ್ಳದಾಗಿರುವ ತಿರುಳನ್ನು ಹೊರಗೆಳೆದು, ಪುನಃ ಸೃಷ್ಟಿಸಿ, ಹೊಸತೊಂದು ಮಿರುಗುಕೊಟ್ಟು, ಕಾಣಲಾರದವರ ಮುಂದೆ ಕಾಣಿಸಲು, ಅವನ ಹೊರತು ಇನ್ನಾರಿಗೂ ಸಾಧ್ಯವಿಲ್ಲ! ಕವಿಯು ಪ್ರಲಯಾತೀತ ! ಆದುದರಿಂದಲೇ

"Captains and conquerors leave a little dust
And kings a dubious legend of their reign
The swords of Ceasars, they are less than rust
The Poet doth remain."

ಎಂದು, ಆಧುನಿಕ ಕವಿಯಾದ ವಿಲ್ಯಮ್ ವಾಟ್ಸನ್ನನು ಕಬ್ಬಿಗನ ಪ್ರತಿಭೆಯ ಕಲ್ಪನೆಯನ್ನು ಮಾಡಿಕೊಟ್ಟಿದ್ದಾನೆ. ಹೀಗೆಂದೊಡನೆ ನಾವೆಲ್ಲರೂ ಅಂತಹ ಕಬ್ಬಿಗನ ಸಾಲಿಗೆ ಸೇರಿದವರೆಂದು ಹೆಮ್ಮೆ ಪಡುತ್ತೇವೆಂದು ಮಾತ್ರ ಯೋಚಿಸಬಾರದು. ಹಾಗೆ ಅಭಿಮಾನಪಡುವಷ್ಟು ಪ್ರತಿಭೆಯು ಜನ್ಮಾಂತರಗಳಲ್ಲೇನೋ ನಮ್ಮಲ್ಲಿ ಅಂಕುರಿಸಬಹುದಾದರೆ, ಅಷ್ಟೇ ಪುಣ್ಯವೆಂದು ನಮ್ಮ ಆತ್ಮದ ಆಸೆ. ಮಿತ್ರಮಂಡಲಿಯು ಇಂದಿನವರ ಪಂಥಕ್ಕೆ ಹೊರಗಾಗಿರದೆ, ತನ್ನಿಂದಾಗುವಷ್ಟು ಸೇವೆಮಾಡಲು ಯತ್ನಿಸಿದೆಯಾದರೂ, ಮಾಡಿದ ಸೇವೆಯು ಸಮರ್ಪಕವಾಗಿದೆಯೆಂದು ಹೇಳಲು ಧೈರ್ಯಸಾಲದು.

ಪಾಂಡಿತ್ಯಪ್ರಭೆಯ ವಿಚಾರದಲ್ಲಿ-ಆ ವಿಚಾರವೇತಕ್ಕೆ?—ನಾವಿನ್ನೂ ತಪ್ಪು ಹೆಜ್ಜೆಯನ್ನಿಡುತ್ತ ಮುನ್ನಡೆಯಲೆತ್ನಿಸುವ ಬಾಲಕರು; ಕಾಣದ ಅಡವಿಯಲ್ಲಿ ತೋರದ ದಾರಿಯನ್ನರಸಿಕೊಂಡು ದೂರದ ಪಯಣ ಮಾಡುವ ಪಥಿಕರು; ಕಗ್ಗತ್ತಲೆಯ ರಾತ್ರಿ, ಬಿತ್ತರದ ಬಾನಿನಲ್ಲಿ ಮಿನು

ಗುವ ಕುಡಿ ತಾರೆಯ ಕಿರುಬೆಳಕಿನಾಧಾರದಿಂದ ಕಾಲಿಡಲು ತೊಡಗಿದವರು. ಎಷ್ಟೋ ಬಾರಿ ಹೆಜ್ಜೆತಪ್ಪಿ ಬಿದ್ದಿದ್ದೇವೆ, ಬೀಳುತ್ತೇವೆ, ಬೀಳಲಿದ್ದೇವೆ. ಆದರೂ ಗುರಿಯನ್ನು ಮುಟ್ಟಬೇಕೆಂದು ಬದ್ಧ ಕಂಕಣರಾಗಿದ್ದೇವೆ. ನಮ್ಮ ಪ್ರಯತ್ನಗಳಿಗೆ ತತ್ಕಾಲಕ್ಕೆ ಫಲವು ಸಿಗದಿದ್ದರೂ ಚಿಂತಿಲ್ಲ. ಇನ್ನುಮುಂದೆ ಈ ದಾರಿಯಾಗಿ ಬರುವವರಿಗಾದರೂ ನಮ್ಮ ಅನುಭವದ ವೈವಿಧ್ಯವೈಚಿತ್ರ್ಯಗಳು ಸಹಾಯ-ವಾದರೆ, ಅದಕ್ಕಿಂತಲೂ ಹೆಚ್ಚಿನ ಹೆಗ್ಗಳಿಕೆಯು ನಮಗೆ ಬೇಕಾಗಿಲ್ಲ.

ರಸಭರಿತವಾದ ಮಾಮರದಲ್ಲಿಯೂ, ಹೂವೂ ಹೀಚೂ ಇದ್ದೇ ಇದೆ. ಇಲ್ಲದಿರುವುದು ಅಸ್ವಾಭಾವಿಕ. ಆದರೆ ಇವುಗಳೇ ಬೆಳೆದು ಮುಂದೆ ಹಣ್ಣುಗಳಾಗಬಹುದೆಂಬ ಭರವಸೆಯೂ ಇದೆ. ಆಮೇಲೆ ಕಾಲವೆಂಬ ವಿಮರ್ಶಕನ ಕೂರಲಗ ಕತ್ತರಿಯಿಂದ ತಪ್ಪಿಸಿಕೊಂಡು— "ಕವಿಯು ಪ್ರಲಯಾತೀತನೇ!" ಎನ್ನಿಸಿಕೊಳ್ಳಲು ಸಾಧ್ಯವಿದೆಯೇ ಎಂಬುದನ್ನು ಪರೀಕ್ಷಿಸಿನೋಡಬೇಕೆಂಬ ನಿರೀಕ್ಷೆಯುಂಟು.

ಮಿತ್ರಮಂಡಲಿ.<br>ಪ್ರಜೋತ್ಪತ್ತಿ,<br>ವಿಜಯ ದಶಮಿ.

**ಪೇಜಾವರ ಸದಾಶಿವರಾವ್.**



# ಹಂಬಲ ಹಾಡು

ಹಾಡುತಿಹೆವು ಪಾಡುತಿಹೆವು
ದೇವ! ನಿನ್ನ ಮಹಿಮೆ ಕಂಡು
ತೋಷದಿಂದ ಉಬ್ಬಿ ಉಬ್ಬಿ
ಹಾಡುತಿರುವೆವು.
ಬಾಳಿ ಬದುಕಿ ಬಳಿಕ ಬಳಲಿ
ಬೀಳಲಿರುವ ಕೋಟಿ ನಾವು
ನಿನ್ನಲೀಲೆ ರಸವ ಸವಿದು
ನಲಿಯುತಿರುವೆವು.

ರವಿಯು ತನ್ನ ರಶ್ಮಿಯಿಂದ
ಶಶಿಯು ಶೀತ ಕಿರಣದಿಂದ
ಕವಿಗಳೆಲ್ಲ ಕಬ್ಬದಿಂದ
ನಿನ್ನ ನುತಿಪರು.
ಶರಧಿ ತನ್ನ ತೆರೆಗಳಿಂದ
ಸಿಡಿಲು ಮಿಂಚು ಘೋಷದಿಂದ
ಭೂಮಿದೇವಿ ಸಹನೆಯಿಂದ
ಒಲುಮೆ ಪಡೆವರು.

ನಾವನೋವ ಮೌನದಿಂದ
ಸಹಿಸಬಲ್ಲ ಸಹನಶೂರ
ಅಚಲ ಶಿಲಾ ತರುಗಳೆಲ್ಲ
ಭಕುತಿ ಬಲ್ಲವು.
ಜಗದ ಜೀವ ರಾಶಿ ಪಿತಗೆ
ದೀನತೆಯಲಿ ಕರೆಯ ಕಳುಹಿ
ಮೌನಗೀತ ಪಾಡಿ ಪರಮ
ಮುಕುತಿ ಪಡೆದವು.

ಬಡವರೆಲ್ಲ ತಮ್ಮ ಹಿರಿಯು
ಹಾಡ ನಿನಗೆ, ದೇವ, ಕಳುಹಿ
ಪಡೆದು ನಿನ್ನ ಒಲುಮೆಯನ್ನು
ಧನ್ಯರಾದರು.
ಸೇನೆಗಳಲಿ ಸೇರಿ ತನುವ
ಸ್ವಾಮಿ ಸೇವೆಯಲ್ಲಿ ಸವೆದು
ಧೀರ ಯೋಧರೆಲ್ಲ ಮಹಾ
ಮಾನ್ಯರಾದರು.

ಭಕ್ತಿ ಭಾವ ಗೀತೆ ರಚಿಸಿ
ಕವಿಯು ಕಬ್ಬಗಳಲಿ ನಿನ್ನ
ಪಾದಪೂಜೆ ಮಾಡಿ ತಾನು
ನಡೆದ ಮುಂದಕೆ.
ಶಬರಿ ಕೊಟ್ಟ ಹಣ್ಣಿನಂತೆ
ಭಕ್ತಿಯಿಂದ ನಿನ್ನ ನಮಿಸಿ
ಧನ್ಯನಾಗಿ ಮೆರೆವ ಬದಲು
ಜಂಭವೇತಕೆ?

ಕಿರಿಯ ಬಾಲರಳುವ ದನಿಯು
ತರುಣ ಜನರ ಸುಖದ ನಗುವು
ಹಿರಿಯ ಕಣ್ಣಪಿರಿಯ ಪಸಿಯು
ನಿನ್ನ ಗೀತೆಯು.
ಭವದ ರಂಗ ಭೂಮಿಯಲ್ಲಿ
ವಿವಿಧ ವೇಷಧರಿಸಿ ನಾವು
ಅಳುತ ನಗುತಲಿರುವ ನಟನೆ
ನಿನಗೆ ಪ್ರೀತಿಯು.

ಕಣ್ಣ ತಣಿಪ ಶೈಲಗಣವು
ಬನವು ಹೊಲವು ಗಿರಿಯು ತೊರೆಯು

ಅನಿಲ ಅನಲರೆಲ್ಲ ನಿನ್ನ
ನೋಡಿ ಗಣ್ಯರು.
ಖಗವು ಮೃಗವು ಕೀಟಕೋಟಿ
ವಿವಿಧವಸ್ತು ನಿಕರವೆಲ್ಲ
ದೇವಿ ದೇವರೆಲ್ಲ ನಿನ್ನ
ಪಾಡಿ ಧನ್ಯರು.

ನಿನ್ನ ಪದವ ಸೇರಲೆಳಸಿ
ಭಕ್ತಿಭಾವದಿಂದ ಭಜಿಸಿ
ಬೆಳಗುಬೈಗು ಧ್ಯಾನದಲ್ಲಿ
ಕೆಲರು ಇರುವರು.
ಭುವನರಂಗ ಸೂತ್ರಧಾರ!
ನಿನ್ನ ಪಾದತಲವ ಮರೆತು
ಪಾಪಭರಿತ ಭೋಗಿಜನರು
ಹಲರು ಮೆರೆವರು.

ಆದರೇನು? ಹರಿಯೆ ನೀನು
ಪಾಪಪುಣ್ಯಗಳಿಗೆ ತಕ್ಕ
ಪಡಿಯನಿತ್ತು ನರಕನಾಕ
ಕಾಣಲಟ್ಟುವೆ.
ಭಕುತಜನಕೆ, ಅಮಿತಗುಣನೆ,
ಅಭಯವಿತ್ತು ಬೆಳಕದೋರಿ
ಪ್ರೇಮಪಾಶದಿಂದಲವರ
ಬಿಗಿದುಕಟ್ಟುವೆ.

—ಪೇಜಾವರ ಸದಾಶಿವರಾವ್.

# ಕೊಳಲದನಿ

ದೂರದೊಳು ಕೊಳಲದನಿ ಯೋರಂತೆ ತನಿಸೊದೆಯು
ಬೀರುತಲಿ ಕಿವಿದೆರೆಗೆ ಕೇಳುತಿಹುದು
ಕಾರಿರುಳು ದುಂಬಿ ಮುಂದೋರದಲೆ ಪುರುಗುತಿಹ
ದಾರಿಯನು ಬಗೆಗೆ ತಾನುಸಿರುತಿಹುದು

ಬೀಸುತಿರೆ ಗಾಳಿ ಕಡಲುಬ್ಬು ಸಂತಸದೆ ಕೈ
ವೀಸುತಲಿ ಪಾಡುತಲಿ ನಲಿಯುವಂತೆ
ಬೇಸರವನಾಂತು ಕಳವಳಗೊಂಡ ಬಗೆವಳ್ಳಿ
ಯಾಸೆಗುಡಿಯನು ತಳೆದು ನಲಿವುದೇಕೆ ?

ಮುಂಜಾನೆಯೊಳುತಿರೆಯು ವೈಭವಕೆ ತಲೆದೂಗಿ
ಯುಲಿಯುತಿಹ ಕೋಗಿಲೆಯ ಗಾನದಿರವೋ ?
ಸಂಜೆಯೊಳು ತಾವರೆಯ ಬೆಂದೊಡಲ ಸಂತೈಸು
ವಾರಡಿಯ ಝೇಂಕೃತಿಯ ಜೇನಿಸಿರವೋ ?

" ಗೆಳೆಯ ಬೇಡುವೆನಿಂದು ಕೈಮುಗಿದು ನಾನಿನಿತು
ಕೊಳಲ ದನಿಯನು ದಯದೆ ನಿಲಿಸವೇಡಾ !
ಕೊಳಲೂದುತಿಹ ನಿನ್ನ ಬಳಿಸೇರೆ ಮನವುತಾ
ನೆಳಸುತಿದೆ ದನಿಯನದೊ ನಿಲಿಸವೇಡಾ ! ॥

—ಎಸ್. ವೆಂಕಟರಾಜ.

# ವಿಯೋಗ

೧

ಎನ್ನ ಜೀವನದ ಮುಕುಲವ ಮುರಿದೆಯೋ ದೇವ
ಎನ್ನ ಹೃದಯದ ಸಿರಿಯ ಸುಲಿದೆಯೊಡೆಯ
ಎನ್ನ ಭಾವದ ತಂತ್ರಿಯನ್ನು ಕಡಿದೆತ್ತೊಯ್ದೆ
ಎನ್ನ ಪ್ರೇಮದ ಕರುಳ ಬಗಿದೆಳೆದುದೇಕೆ?

೨

ಕಾರ್ಮುಗಿಲು ನಭವನಾಕ್ರಮಿಸಿಹುದು, ಕತ್ತಲೆಯ
ಊರ್ಮಿಗಳು ಜಗದಿ ತಾಂಡವ ನೃತ್ಯವೆಸಗುತಿವೆ,
ಘೂರ್ಣಿಪುದು ಕಡಲು, ಝುಂಝಾವಾತ ಝಾಡಿಪುದು
ಭೂತಲವ, ಮಿಂಚಿನಲಗು.
ಕಾರಿರುಳ ಗರ್ಭವನು ಸೀಳುವುದು, ಗುಡುಗುಗಳು
ಭೂರಿ ಗುಂಡಿನಮಳೆಯ ಸುರಿಸುವುವು, ಭೋರ್ಗರೆದು
ಘೋರದುಃಖದ ತರಂಗದಲಿ ಮುಳುಗೇಳುವುದು ಜರ್ಜರಿತ
ಹೃದಯನೌಕೆ.

೩

ಜಲರಾಶಿ ಮುಂದಿಹುದು, ನೀರಡಿಕೆಯಹುದು;
ಜ್ವಲಿಸುವನು ರವಿ ಧರೆಯ, ಚಳಿಯಾಗುತಿಹುದು;
ಬೆಳೆಸುವನು ಪ್ರೇಮರಸ ಚಂದ್ರಮನು ಬಂದು;
ಕೆಳೆಯ! ನೀನಿಲ್ಲದೆನಗೆಲ್ಲಿ ಸುಖವಿಂದು?

—ಕೆ. ರಾಘವಾಚಾರ್.

# ಕಾರ್ಕಳ ಗೋಮಟೇಶ್ವರನಿಗೆ

ನಿನ್ನನೋಡಿದುದರಿಂದೆನ್ನ ಮನಕದಡಿ ತಾ
ಮುನ್ನೀರವೊಲು ಉಬ್ಬಿ ತಳಮಳಿಪುದು.
ಇನ್ನೆನಿತೊ ಮನಸೋತು ನಿನ್ನ ಬಲುಮೆಯ ಪಾಡಿ,
ಸನ್ನುತಾಂತರ್ಯತೋಷವ ಪಡೆದುವೊ
ನರರೊ ಮಾನವಶಕುತಿಯರಿವ ಮೀರಿದರೊ ಮೇಣ್
ಸುರರಿಂದ ಪ್ರೇರಿತರೊ ನಿನ್ನಯಿರವ
ಸ್ಥಿರಗೊಳಿಸಿದವರಿಲ್ಲಿ, ನರರೆಂಬೊಡದು ಯೆನ್ನ
ಅರಿವಿಂಗಮಾನುಷವದಾಗಿ ಸಲುಗುಂ.
ಎಲ್ಲಿ ಲಭಿಸಿತೊ, ನಿನ್ನ ಅಂಗದಾಯತಕಪ್ಪ
ಕಾರ್ಕಲ್ಲು, ಮೇಣದಕದೆಂತು ನರರ
ಕಪ್ಪಲ್ಲಿಸಾಮರ್ಥ್ಯದಿಂ ನಿಜರೂಪುಗೊಟ್ಟುತಾ
ಎಲ್ಲಿಗೆಂತೊಯ್ದರೋ ಅರಿದರಾರು ?
ಬಿರುಬಿಸಿಲು ಗಾಳಿಮಳೆಗಳ ತಾಳಿ ಯಿನಿತುದಿನ
ಇರಿಸಿಕೊಂಡುದುದೆಂತೊ ನಿನ್ನ ಶಾಂತ
ವರಮೂರ್ತಿರೂಪವನು, ಅರಿಯುವಾಪೂರ್ವದೆಯಂದು
ನರರೂಪುಗೊಟ್ಟ ಆ ಕರ ಬಲುಮೆಯ.
ಹದತೂಕದಿಂದ ನಾಲ್ವತ್ತಡಿಯ ಆಕೃತಿಯ
ಸ್ಥಿರಲಂಬವಾಗಿ ಇರಿಸಿದರದೆಂತೊ!
ಐದುಶತಮಾನ ಪೂರ್ವಜರಿನಿತು ಬಲ್ಲಿದರೊ,
ಹಳಿಯಲವರನದೆಂತು ತಾಳಬಹುದು ?
ಆಗಸಾಂತರಕೆ ನೀಡಿಹ ನಿನ್ನ ರೂಪವನು
ನೋಡಿಯೆನ್ನಯ ಚಿತ್ತ ಸುಮ್ಮನಿರದು ;
ಆಗಿಹೋದಾ ಶಿಲ್ಪಿಗಳ ಕಲಾಕೌಶಲವ
ನೆನೆಯೆ ಮನ ಹಾಡಾಗಿ ಪರಿದುದಿನಿತು.

—**ಪದ್ಮನಾಭ.**

# ಆರಿದ ದೀಪ

ತಮ್ಮ ಚೆನ್ನನಗೆಯ ರನ್ನವನ್ನು ತೋರದಾದನೋ !
ಕಾಲನೆಂಬ ಕಟುಕಬಂದು ನಿನ್ನ ಕೊರಳ ಕೊಯ್ದನೋ !
ಇನ್ನು ತಮ್ಮನೆನುತ ಪೇಳ್ವೆ
ನಾರ? ಮಧುರನುಡಿಯ ಕೇಳ್ವೆ
ನೆಲ್ಲಿ? ಮುಗಿದುದಿವಸ ಬಾಳ್ವೆ
ಯಿನ್ನು ಕಾಣಲಮ್ಮೆನು;
ಕಣ್ಣುತೆರೆದು ಮನವನರಿದು ನೋಡು ಕೂಡು ನಮ್ಮನು.

ಆ ವಸಂತಕಾಲದಲ್ಲಿ ಟೊಂಗೆಯುಯ್ಯಲಾಡುತ,
ಚೂತತಳಿರನೆಡೆಯ ಮೂಡವೇರಿ ಹಾಡಹಾಡುತ,
ಮುದದೊಳಿರ್ದ ಕೋಗಿಲೇ
ಮೂಗುವಟ್ಟುದಾಗಲೇ;
ಬಿದಿರಿಪುಕ್ಕವೀಗಲೇ
ಪ್ರಾಣಪಕ್ಷಿಹಾರಿತು;
ಗಗನತಳದ ಸುಖದ ಬೀಡಗೂಡಸಹಹು ಸೇರಿತು !

ಘೋರಗುಹೆಯ ಕತ್ತಲಂತೆ ಮುಖವುನೋಡೆ ಭೀಕರಂ!
ಮೃತ್ಯುಕಳೆಯು ನಾಟ್ಯವಾಡುತಿಹುದು ಸಲೆ ಭಯಂಕರಂ !
ಮುಚ್ಚಿರದ-ಕವಾಟವಾ,
ತಡೆಯುತುಸುರಿನಾಟವಾ,
ಕೊಂಡು ಪಾಪಪುಣ್ಯವಾ,
ಸಗ್ಗಕಡರ್ದೆ ಮರುಗಿಸಿ,
ಸಮ್ಮ ಹೃದಯ ಕಡಲಿನಲ್ಲಿ ದುಃಖದಲೆಯನೆಬ್ಬಿಸಿ !

ರವಿಯು ಹೊನ್ನ ಸರಿಗೆಯನ್ನ ಎಸೆಯುತಿರುವ ವೇಳೆಗೆ,
ಮನೆಯಮುಂದೆ ಕಾಂಬ ಮರದ ರೆಂಬೆ ಬಾಗಿ ತಮ್ಮಗೆ,
ಸಾನುಭೂತಿಯಾವುದೂ;
ಕೂಗಿ ಕೂಗಿ ಕರೆವುದೂ,

ಅವನ ಹಿಂದಿನ ಚರಿತೆಯಲಿ, ಬೆಳೆದೊಲಿದ ಭಕ್ತಿ-
ಕವಿತೆಯಲಿ, ನೇಹನೇಸರು ಹೊಳೆಯುವಲ್ಲೊಲವು-
ಮುಂಬನಿಯು ಸುರಿಯುವಲ್ಲಿ.
ಸವಿನಯದ ಸುಣ್ಣರದ ತಂಗಾಳಿ ಹರಿವಲ್ಲಿ,
ಅವನಂತರವು ಮೂಡಿ ಸೇವೆಯಲಿ ತಣಿತಾಗ
ಅವನಲ್ಲಿ ನೀನಿರುತಿಹೆ!

ಜೀವನದ ಕೊನೆಯಿರದ ಹೊತ್ತಗೆಯನೊಂದೆ ನುಡಿ
ಭಾವದಿಂದೋದಿ ಮುಗಿಸಿದ ಕವಿಯ ಕಂಠದಲಿ,
ಲೇಖದಲಿ, ಕಳೆ-ಹುರುಳಲಿ!
ಅವನೊರೆದಿಹ ಬದುಕು ಮುಗಿಲು ಬೆಟ್ಟದ ಬಾಳೊ!
ಅವ ಕನಸದಿ ವಿರಹ, ವಿಲಸ, ತಾಪವು, ತೋಷ-
ವೊಳವೆಳಕನುಳಿಸುತಿಹುದೋ?

ಕಬ್ಬಿಗನವನ ಮುಂಬೆಳಕು ನೀನು! ನಿನ್ನರಿವು
ಕಬ್ಬಿಗನ ಭಾವ! ಹಲಜನರು ತಂಗುವ ಠಾವ!
ಬಾಳಿನೇರಿಳಿತಗಳಲಿ
ಮಬ್ಬುವೆಳಕಿನ ಕಳೆದುಬರುವುದರ ಕಾಲಗತಿ
ಕಬ್ಬಿಗನ ದಿನದುಣಿಸು! ಅದರಲ್ಲಿ ಅವನುಣಿಸು!
ಅವನಲ್ಲಿ ನಿನ್ನಾತಣ!!

—ಶ್ರೀನಿವಾಸರಾವ್, ಕದಿರೆ.

# ಏಕೆ?

ಆಗಸವ ಮುಚ್ಚಿಂಜಿ ಮುಚ್ಚುತಿಹ ವೇಳೆಯುಲಿ
ನಿನ್ನ ನೆನೆವೆಸು ನೀರೆ-ಏಕೊ ನಾನರಿಯೆ!
ಭಾವಲತೆಯುಲಿ ನಿನ್ನ ಮೂರುತಿಯು ಬಿರಿಯುವುದು,
ಒಲುಮೆಯಿಂ ಮೆರೆಯುವುದು-ಕಾರಣವ ತಿಳಿಯೆ!

ತುಂಬಿಗಳು ಹೂವುಗಳ ಚುಂಬಿಪುದು ಕಂಡೊಡನೆ
ನಿನ್ನ ಮುಂಗುರುಳನ್ನು ನಾನೆನೆವೆನೇಕೆ?
ಕೋಗಿಲೆಯ ಗಾನವನು ಕೇಳುತಲಿ ನಾನಿನ್ನ
ಕೊರಳ ಮೆಲ್ನುಡಿಯಿಂಪ ನೆನೆಸುತಿಹೆನೇಕೆ?

ಕಾರಿರುಳ ನಭದಲ್ಲಿ ಜೊನ್ನ ಮಳೆಯನು ಕರೆದು
ರಜನಿಯನು ರಂಜಿಸುವ ರಜತಚಂದಿರನ
ಎಳನಗೆಯ ಕಂಡೊಡನೆ-ಚೆಲುವ ಚೆಲ್ಲುವ ಚೆನ್ನೆ,
ನಿನ್ನ ಹೊಳಪಿನ ರೂಪ ಜಪಿಸುತಿಹೆನೇಕೆ?

ನಿನ್ನಚ್ಚರಿಯ ರೂಪವನು ರೂಪಿಸಲು ಮೆಚ್ಚಿ,
ಹೆಚ್ಚಿದಾಸೆಯು ಬಿಡದೆ ಬಾಧಿಸುವುದೆನ್ನ
ಮನದೊಗೆವ ಮಾತೆರಡ ಮಣಿಮಾಲೆ ಪೋಣಿಸುತೆ
ಕೊನೆಕೊನೆದುಕೊಂಡಾಡಿ ಮುದವಾಂಪನೇಕೆ?

—ಬಿ. ಆರ್. ಕಾಮತ್.

# ಬೇಡಿಕೆ

ಎನ್ನಮನದಾ ಭಾವಝರಿಯು ಜಾಹ್ನವಿಯಾಗಿ
ನಿನ್ನ ಪಾವನ ಪಾದವಂ ತೊಳೆಯುತಿರಲಿ.
ಎನ್ನ ಜೀವನ ವೀಣೆ ನಿನ್ನ ಸದಮಲ ನಾಮ
ದುನ್ನತ ಪದಂಗಳಂ ಬಾಜಿಸುತಲಿರಲಿ.

ಬದಿಯು ಪಡಿನೆಳಲಡಿಯೊಳಿದ್ದೆನ್ನ ತನುಲತೆಯು
ರೋಗವೆಂಬೊಂದು ಮುಳ್ಬಳ್ಳಿ ಬಿಗಿದಿಹುದು
ಬಲವಾಂತುಮುಂದೆ ಅದು ಲತೆಯನಳಿಸದ ತೆರದಿ
ಬೇರನ್ನೆ ಕಿತ್ತೊಗೆದು ಲತೆಯನುಳಿಸುವುದು.

ಮುಗುಳೊಂದು ಬಿರಿವ ಮೊದಲೇಕೆ ಕೊಯ್ಯುವೆ ಎರೆಯ ?
ಆವನೋಡಿಹನದರ ಸೌರಭದ ಸಿರಿಯ ?
ಆವಾಕೆ ಮುಡಿಯಬಯಸಿಹಳೊ ಮುಂದೀ ಮುಗುಳ
ಆವ ಅಳಿಯುದರ ಮಧುವಂ ಸವಿಯಲಿಹುದೋ.

ಬೀಸುವೀ ಬಿರುಗಾಳಿ ಎನ್ನ ಮನದಾವರೆಯ
ಘಾಸಿ ಮಾಡುವುದೆಂಬ ಮನದ ಬೆದರಿಕೆಯ
ನಾಶಮಾಡೋದೇವ! ಲತೆಬೆಳೆದು ಫಲವೀವ
ಆ ಸಮಯ ಬರಲಿದುವೆ ಮನದ ಬೇಡಿಕೆಯು.

—ಸ್ವರ್ಗೀಯ ಕೆ. ಟಿ. ಆಚಾರ್ಯ.

# ಮರದೆದುರಲ್ಲಿ

ಹಗಲನ್ನು ಇರುಳುಗಳು ಹಿಂಬಾಲಿಸುತ್ತಿರಲಿ!
ನೀ ನಿನ್ನ ತನಿಗಂಪ ಸೂಸುತ್ತ ಬೆಳೆಯು.
ನೇಸರನ ಬಿಸಿಲಲ್ಲಿ ಬಳಲುತ್ತ, ತಿಂಗಳಿನ
ತಣ್ಣೀವ ಜೊನ್ನದಾ ಸೊಂಪಿನಲಿ ತಣಿಯು.
ಕೆಲಹೊತ್ತು ಬಾಳ್ಗಳಿವ ತಿರೆಯಲ್ಲಿ ನೀನೊಮ್ಮೆ
ಮರೆಯುತ್ತ ತಂಬೆಲರ ಸೊಗಸಿಂಗೆ ತೂಗು.
ತುಂಬಿಗಳು ಹಾಡುಗಳನುಲಿವಂದು ನೆನೆಯುತ್ತ
ಕೊರಲನ್ನು ಒಲೆದಾಡ ತಿರವಾಗಿ ನಿಲ್ಲು.

ಕಣ್ಬಿಟ್ಟ ಕತ್ತಲೆಯು ಚುಕ್ಕಿಗಳು ಮಿಣುಗೆ,
ಕಿತ್ತೊಡಲ ಚಿಗುರನ್ನು ಹೊರಸೂಸು ಕ್ರಮದೆ;
ಎಳಬಿಸಿಲ ಹೊಳಪಿನಲಿ ತುಂಬಿಗಳು ಉಲಿಯೆ,
ಮೊನೆಮುಗುಳ ಹುವ್ವುಗಳ ಸೊಗಸನ್ನು ಬೀರು.

ಮುಂಬರಿವ ತಂಗಾಳಿ ಬಳಿಯಲ್ಲಿ ಸುಳಿಸುಳಿಯೆ,
ತರಗೆಲೆಯನುದುರಿಸಲು ನೀ ಕಂಪಿಸೊಮ್ಮೆ.
ಅಲ್ಲೊಂದು ಇಲ್ಲೊಂದು ಮುದಿಯೆಲೆಯು ಕೆಡಿಸುವುದು
ಮೆಲ್ದಳಿರ ಗೊಂಚಲಿನ ಓರಗೆಯ ಚೆಲುವು.
ಮುಂಜಾನೆ ನಸುಗಾಳಿ ಮೆಲ್ಲಡಿಯ ನಡೆಯಲ್ಲಿ
ಉಜ್ಜುಗದ ಬೆಜ್ಜರದ ಮನದಿಂದ ಸುಳಿಯೆ,
ನೀನಿನ್ನ ಹೂತಳಿರ ಇನಿಗಂಪ ಬೀಸಣಿಗೆ
ಬೀಸುತಲಿ ಬಳಿಯೆಲರ ಅಲಸಿಕೆಯ ತೂರು.

ಮುಂಜಾನೆ ತಂಗಾಳಿ ತಿಳಿಗಾಳಿಯಾಗಿ
ಅಜ್ಞಾನಮೇಘಗಳನೊತ್ತುವುದು ಬದಿಗೆ;
ಮನಸಿನಾ ಮುಂಬಾನ ಶುಭ್ರತೆಯು ಗಳಿಸೆ
ಗಂಡಸಿನ ಬೀರವದು ಬೆಳಗುವುದು ನಿಜದೆ.

ಇಬ್ಬನಿಯು ಅಡಿಯಲ್ಲಿ ತನಿಜೇನು ಮಿರುಮಿರುಗೆ,
ಅಲೆದುಲಿದು, ಹಿಂಜರಿದು, ಬಿರಿಪುವ್ವ ಮೊಗಕೆ
ಬಂಡುಣಿಯು, ಕಡೆಗೊಂದು ಮುತ್ತಿಡಲು ಹೂತಳಿರ
ಇಬ್ಬನಿಯು ತುಂತುರಿನ ಕಂಬನಿಯ ಮಿಟುಕು.
ಅಲರುಣಿಯು ಸೊದೆ ಜೇನನುಣುವಾಗಲನಿಮಿತ್ತ
ರೀತಿಯಲಿ, ಎಲೆ ಮರವೆ, ನಡುಗೊಮ್ಮೆ ಇನಿತು :
ಆ ದುಂಬಿಯಾಗ ತುಸು ಬೆದರುತ್ತ, ಮೊಗವೆತ್ತಿ,
ನಸುನಕ್ಕು ತಿರಿಗೊಮ್ಮೆ ಕುಡಿಯುತ್ತಲಿರಲಿ.

ತುಂಬಿಗಳು ಹುವ್ವುಗಳ ಜೇನನ್ನು ಹೀರೆ,
ಪರಿಮಳವು ದೆಸೆದೆಸೆಗೆ ಹರಡುವುದು ನಿಜವೆ?
ಸವಿ ತಿಳಿದ ತುಂಬಿಗಳ ತಿರೆಗೊಂದು ಒಸಗೆ
ಸವಿಹಾಡ-ಸವಿವಾತ-ಸಿಹಿಬಗೆಯ ಸವಿಯೆ ?

ಎಳದಳಿರ ಹಸುರೊಳಗೆ, ಅರೆಬಿರಿದ ನನೆಯಲ್ಲಿ,
ಕಾದಿಟ್ಟು ಇಬ್ಬನಿಯನಲ್ಲಿಂದ ನೀನು
ತುಂಬಿಗಳ ಮರಳಿಸುತ, ಎಳಬೆಳಗ ಕಾವನ್ನು
ತಣಿಸುತ್ತ, ಹುವ್ವುಗಳ ಕಾಪಿನಲಿ ತೊಡಗು.
ಅರೆಬಿರಿದ ಮೊಗ್ಗುಗಳ ಒಳಹೊಕ್ಕು ತುಂಬಿಗಳು,
ಎಸಳುಗಳ ಸಡಲಿಸುತ ತೋರಿಕೆಯ ನಗೆಯ,
ಮುಗುಳಿಂಗೆ ಈಯಲದು ತುಂಬುನಗೆ ಮುಗ್ಗುವುದು;
ಮುಗ್ಗಲದು ನಲವಿಳಿದು ಸಿರಿ ಸೊನ್ನೆಯಹುದು.

ಮುಗುಳುಗಳ ಜೇನಿಂಗೆ ಸವಿಯಿಲ್ಲವಿನಿತು
ಅರಡಿಯ ರಸಿಕಂಗೆ ಪುಸಿಸವಿಯು ಕಸವು.
ಪುಸಿಹೊತ್ತುಬಾಳುವೆಯ ಕೈಮಾಟ ಸೊಗಸು
ರಮಿಸುತ್ತ ಸೇವಿಸುವ ಅಳಿಗೊಂದು ತೊಡರು.

ತುತ್ತತುದಿ ತಳಿರುಗಳ ತೊಟ್ಟಿಲಲಿ ಪವಡಿಸಿದ
ಬಿರಿ ಪುವ್ವೆ, ನೀನೆದ್ದು ಕೆಳಗದರ ಉರುಳು.

ಇರುತಿಹುದು ತುಂಬಿಗಳ ಸಲವಿಂದ ತೊನೆಯುತಿಹ
ತೂಗುಯ್ಯಲೊಂದಲ್ಲಿ, ತಿರಿಗೊಮ್ಮೆ ಉರುಳು.
ಇಲ್ಲೊಂದು ತೋಳುಗಳ ತಕ್ಕೆಯಲಿ ರೋಮಾಂಚ
ಸುಖವನ್ನು ತಳೆಯುತ್ತ ಮುಗುದೊಮ್ಮೆ ಬೀಳು.
ತಳಿರಿಂದ ತಳಿರಿಂಗೆ ಗೆಲ್ಲಿಂದ ಗೆಲ್ಲಿಂಗೆ
ಉರುಳುತ್ತ ಮೆಲ್ವಾಸ ನೆಲದಲ್ಲಿ ಮಲಗು.

ತೊಟ್ಟುದುರಿ ಮೇಲಿಂದ ಕೆಳಗುರುಳಿ ನೆಲಕೆ,
ಬಂಧುಗಳ ಸಾಂತ್ವನದ ಆರೈಕೆ ತಿಳಿಯೆ,
ಬೀಳುವಿಕೆ ದುಗುಡವನು ಸಂತೈಸಿ ಬಳಿಕ
ಸಾವನ್ನು ಸಾವಿನೊಳೆ ಮರೆಸುವುದು ಮರವೆ.

ನೇಸರನ ಬಿರುಬಿಸಿಲು ಮೆರೆಮೆರೆಯೆ, ಹಕ್ಕಿಗಳ
ಮೆಲ್ನುಡಿಗಳೋಲಾಡೆ ಗೂಡಿನೊಳಗೊಳಗೆ,
ಸರಿಸದಲಿ ಹರಿಯುತಿಹ ಹಳ್ಳಗಳ ತೊದಲುಲಿಯು
ಹಾಡುಗಳನಾಲಿಸುತ ಬಗೆಯನ್ನು ತಣಿಸು.
ಆರಿಸಲು ನಡುಪಗಲ ದಣಿವನ್ನು, ಹಸು ಮೇಕೆ
ಮೆಲುಕಾಡಿ ನಿನ್ನಯಡಿ ತಣ್ಣೆಳಲ ಸೇರೆ,
ಮೋಡಗಳು ಬಾನಿನಲಿ ಕೂಡುತ್ತ ಪಡಿನೆಳಲ
ತಂಪನ್ನು ನಿನಗಿತ್ತು ಆಸರೆಯು ನೀಯೆ.

ಮುಗಿಲುಗಳು ಮುದುಡುತಿಹ ಚಿಗುರೆಲೆಯ ಕಂಡು,
ಕಂಬನಿಯ ಮಿಟುಕುವುವು ಮೋಸದಲಿ ಸುರಿದು;
ಕಿರುಮಳೆಯ ತಟಕುಗಳ ಸೊದೆಯಲ್ಲಿ ಮಿಂದು,
ಮುಂಬನಿಯ ಒಲವನ್ನು ಪೊಗಳುವರು ಜನರು.

ಹೂಬಿಸಿಲ ಬೈಗಿನಲಿ ಅಣುಗಿಯರು ಕೂಡುತ್ತ,
ಹಾಡುತ್ತ, ನಲಿಯುತ್ತ, ನಿನ್ನಡಿಯ ಸೇರಿ,
ಬಗ್ಗಿರುವ ಕೊಂಬೆಗಳ ನೆಳೆಯುತ್ತ ತನಿವಣ್ಣ
ಕೊಯ್ಯುತ್ತ, ಸವಿಯನ್ನು ಸವಿಯುತ್ತ, ಕಲೆತು—

ಟೊಂಗೆಗಳಿಗುಯ್ಯಾಲೆ ಇಳಿಸುತ್ತಲದರಲ್ಲಿ
ತೂಗುತ್ತ ಬೆದರುತ್ತ ಇನ್ನೊಮ್ಮೆ ತೂಗಿ,
ತೂಗನ್ನು ನಿಲ್ಲಿಸಲು, ಆಸವಳಿಯೆ-ಕತ್ತಲೆಯು
ಒತ್ತಿನಲಿ ಅಣುಗರಿಗೆ ಮೊರೆಯನ್ನು ಕೊಡಲಿ.

ಕೊಂಬೆಯಲಿ ಕುಳಿತಿರ್ದ ಅಣುಗರುರೆ ಸಕ್ಕು
ತೂಗಾಟದಾನಂದ ಕೂಗಾಟವಾಗೆ,
ಅಣುಗಿಯರ ನಡುನಿಂತು, ಅವರನ್ನು ಇಳಿಸೆ
ಉಯ್ಯಾಲೆ ಹಗ್ಗವನು ಹಿಡಿದಿಳಿಯುತಿರಲು-

ತೂಗಿಂತು ನಿಲ್ಲುವುದು; ಕನ್ನೆಯರು ಹಾರಿ
ಓಡುವರು ನಸುನಕ್ಕು; ಬಳಿಕೊಮ್ಮೆ ಹಿಂದೆ
ತಿರುಗುತ್ತ ನೋಡುವರು ಹಸುಳೆಗಳ ಮೊಗದೆ,
ಕೊನೆಯಿರದ ಅಚ್ಚರಿಯ ಸೊಂಪನ್ನು, ಮರವೆ!

ಅಂತಾಗೆ, ಗಿಡಬಳ್ಳಿ ಮರಪೊದರ ಹಸುರನ್ನು
ಬಲ್ಗತ್ತಲೆಯು ಕಪ್ಪು ಆವರಿಸಿ ಬರಲು,
ಎಲೆ ಮರವೆ, ಮೂಡಿರುವ ಚುಕ್ಕಿಗಳನೆಣಿಸಲ್ಕೆ
ಬಗೆಯುತ್ತ ಲೆಕ್ಕಿಸುವ ಪಡಿನೂರ ಶತಕೆ
ಹೊಸದೊಂದು ಚಿಗುರನ್ನು ಹೊರಸೆಗೆಚು. ಬಳಿಕೆಣಿಕೆ
ತಪ್ಪುತ್ತ ನಿನ್ನಲ್ಲಿ ಆಸರೆಯ ಪಡೆದ
ಹಕ್ಕಿಗಳ ಗೂಡುಗಳ, ಗೂಡುಗಳ ಪಕ್ಕಿಗಳ,
ನೆಣಿಸುತ್ತಲೆಣಿಸುತ್ತ ನಿದ್ದೆಯನು ಹೊಂದು.

ಕರಿಮುಗಿಲ ನಡುನಿಂತ ಬಿಳಿಮುಗಿಲ ಮರೆಗೆ
ತಿಂಗಳನು ನಡೆತಂದು ಬೆಳದಿಂಗಳೊಸರೆ,
ಕನಸೊಂದು ನೀನಾಂತು, ತಿರಿಗೊಮ್ಮೆ ಅವನು
ಗಹಿಗಹಿಸಿ ನಗುವಂದು ಎಚ್ಚೆತ್ತು ನೆನೆಯು.

ಕನಸೊಳಗೆ, ನೂರಾರು ಹಣ್ಣುಗಳ ಹೊತ್ತು
ಹಾಸಿರುವ ನೆಲದಲ್ಲಿ ಬಾಗುತಲಿ ಮಲಗು.
ಎಳಮಕ್ಕಳೊಂದಾಗಿ ಕುಣಿಯುತ್ತ ಬಂದು
ನಲವೇರಿ ಹಣ್ಣುಗಳ ಕೊಯ್ಯುವವು ನಿಂದು.

ಗೂಡುಗಳ ಹಕ್ಕಿಗಳು ಮಕ್ಕಳಿಗೆ ಬೆದರಿ
ಮೊರೆಯುಲ್ಕೆ ಹಲಕೆಲವು ಸಿಕ್ಕಿದೆಡೆ ಪಾರೆ,
ಕೆಲಕೆಲವು ಪುಕ್ಕದಲಿ ಅಡಗಿಸುತ ಮರಿಯು
ಚೀರುತ್ತ ಬಾನಿಂಗೆ ಕೊನೆಗಣ್ಣು ತೋರೆ—

ಕನಸಿನಾ ಗಲಿಬಿಲಿಯು ನೀ ಕೇಳಿ ಬೆದರೆ,
ಕಂಪಿಸುತ ನಸುಗಾಳಿ ಹೊರಡಿಸುತಲೊಡನೆ
ನನಸಾಂತು ಕೇಳುವೆಯ, ಸೊಗವಕ್ಕಿ ಮಾತು ?
"ಇರುಳನ್ನು ಸುಖದಿಂದ ಕಳೆದಿಹೆವು" ಎಂದು.

— ವಾಮನ.

## ಕಳವೆಯ ಹೊಲ

೧

ಮೆಲ್ಲಿತೆಲರದೆಲ್ಲ ಹೊಲವ ನಿಲ್ಲದಲುಗಿಸಲ್,
ಲಲಿತ ಲಾಸ್ಯ ಕಲಲು ನಟಿಪ ತೆರದೆ ದ್ಯೋತಿಸಲ್ ;
ಪ್ರಸರಗೈದು ತನತು ಕರವ
ಸಿರವನಲುಗಿಸುತಲಿ, ಹೊಳೆವ
ಮಣಿಗಳಾಂತ ಚೆಲುವ ತೊಡವ
ಧರಿಸಿ ನಲಿಯುವ,
ತೋರ್ಪುದಮರ ವಧುಗಳವನಿಗಿಳಿದ ಬಿನದವ.

೨

ತುಡುಗಿ ಕಳಲ್ ಬಿಡದೆ ಬರ್ಪ ಪಕ್ಕಿ ಬಳಗಮುಂ,
ಇಡಿದ ಕಣವನೊಡೆದು ತಿನಲು ಪಾರುವಳಿಲುಮುಂ,
ತಡೆದು ಕೂಡೆ ನೋಪಲೆಂದು,
ಹುಣಿಸೆ ಮಾವು ಹಲಸು ತೆಂಗು,
ಹೊಲದ ತಡಿಯೊಳುದಿಸಿ ನಿಂದು,
ಕವಲು ಕೈಗಳಂ
ಎಲರ ಚಲನೆಗಲುಗಿಸುತಲಿ ತೋರ್ಪುದಂದಮುಂ.

೩

ಪಚ್ಚೆಯುಡಿಗೆ ಪೊನ್ನದೊಡಿಗೆಯಿಂದೆ ಶೋಭಿಪ,
ಮರ್ತ್ಯಲೋಕ ಜನಕೆ ಜೀವಶಕ್ತಿ ದೊರೆಯಿಪ,
ಕಳವೆ ಸಿರಿಯ ಸೊಬಗ ನೋಡಿ,
ಹರಿಸದೊಡವಮೊಗದೆ ಕೂಡಿ,
ಇನಿಸು ನಡೆಯ ತಡೆಯ ಮಾಡಿ,
ದಾರಿವೋಪರು,
ಹೊಲದಕಡೆಗೆ ತಿರಿದು ತಮ್ಮ ಶ್ರಮವ ತಣಿಪರು.

೪

ಉದಯವಾಗಲೊಮ್ಮೆ ದಿನದ ಮೊದಲು ಕೃಷಿಕನು,
ಹೊಲದ ಕೈಯ ಫಲಿತ ತೆನೆಯ ನೋಡಿ ನಲಿವನು ;
ಬೆಳೆಯ ಸಿರಿಯದೆಂಬ ತನ್ನ
ಜೀವನವನು ಕೊಡುವ ಮುನ್ನ,
ಜೀವನವನು ಕೊಡುತಲವನ
ಋಣವ ಸಲಿವನು,
ಒಲಿತ ಕಳವೆ ಕಣವ ಪಡೆಯಲಿದಿರುನೋಳ್ಪನು.

೫

ಕಳವೆ ಹೊಲದ ಸೊಬಗ ನೋಡಿ ಹರಸದೊಡವನು
ಬಗೆಗೆ ತರದ ನಯನವಿರದು, ಪೊನ್ನಕದಿರನು
ಪಳಿವ ಫಲಿತ ಹಳದಿತೆನೆಯ
ಫಲವ ನೆನೆದು, ಕಳವೆ ಸಿರಿಯ
ಭುವಿಗೆ ಸಲಿಸಿ ಹರಸಿದೊಡೆಯ
ಕರುಣೆ ಮೂರ್ತಿಯ
ಸ್ಮರಿಸದಿರದ ಮನುಜನಿರನು ವಿಶ್ವಶಕ್ತಿಯ.

—ಪದ್ಮನಾಭ.

# ಅನಂಗ

ಎಳೆದಳಿರ ಪೊಗರೊಳಗೆ, ತೊಳಪ ಹಿಮಕಣದೊಳಗೆ
ಜಲಧಿಯೂರ್ಮಿಯ ಒಳಗೆ, ಭಾನು ಬಾಸುಗಳೊಳಗೆ
ಕಳಿತ ಫಲದೊಳಗರಳಿ ಸೊಗಯಿಸುವ ಪೂದೊಂಗಲೊಳಗಿರುವನಂಗ-
ನೀನು.

ಕಲರವದ ಕೋಕಿಲದ ಗಾಯನದ ಲಯದೊಳಗೆ
ನಲಿನಲಿದು ಪರಿತರುವ ಪರಿಕಾಲಿನುಲಿಯೊಳಗೆ
ಚಲಿಸುತಿಹ ತುಂಬಿಗಳ ತಂಬೂರಿಯೊಳಗಿರುವ ಗಾಯಕನು
ನೀನಾರೆಲೈ?

ಮುಗುಳುಗಳ ಮುದ್ದಿಸುತೆ, ಮುಗುಳುನಗೆಯೊಡನೈದೆ
ದಿಗುವಲಯದೊಳಗೆ ಮುಂಬೆಳಗ ಬಲ್ಸರಗರೆದು,
ತೆಗೆದೊಗೆದು ಕಮಲಸಿಯ ಬಾಗಿಲದ ಬೀಗವನು, ಮೆರೆವ ನೀನಾರು
ದೇವ?

ಮಿಗಿಲೆಸೆವ ತೃಣರಾಜಿಯೊಳಗಿರುತೆ ಗೋವುಗಳ
ಬಗೆಯನಿಳ್ಕುಳಿಗೊಂಬ ಸೊಗಸಿನವ ನೀನಾರು?
ಲಗುಬಗೆಯ ಬಾಲೆಯರ ಕಣ್ಗೊಂಬೆಯೊಳು ನಲಿವ ನೀನಾರು
ಚೆಲುಗೊಂಬೆಯು?

ಹೃದಯ-ವೀಣೆಯ ತಂತಿಗಳನು ಮಿಡಿಯುತಲಿರುವೆ!
ಮಧುರ ಗಾಯನ ಲಯವು ಮಾನಸಾಕಾಶದಲಿ
ಪದೆದು ಮರುದನಿಯನಿರದಿತ್ತು ಲಯವಪ್ಪುದೈ! ವೈಣಿಕನು
ನೀನಾರೆಲೈ?

ಕದಡಿದೆನ್ನೆದೆಯೊಳಗೆ ಗಾನಮಾಧುರ್ಯವನು
ಒದವಿಸುತೆ, ಸಂಗೀತದೇರುಂಗತಿಯೊಳೆನ್ನ
ಹೃದಯವನು ಕುಣಿಕುಣಿಸಿ, ಮನದಣಿಸಿ, ಬಗೆಗೊಳಿಸಿ, ಸೊಗದ
ಸುಗ್ಗಿಯನುಣಿಸುವೆ!

ಮಮ ಹೃದಯದಾರಾಮದಲಿ ರಮಿಸುತಿಹ ನೀನು
ಸುಮಧುರಾಲಾಪದಲಿ ಪಾಡುತಿರೆ, ನಿನ್ನೊಳು-
ದ್ಗಮಿಸುತಿರುವಿಂಚರವು ಚಿತ್ತಗಹ್ವರದೊಳಗೆ ಮರುದನಿಯ
ನೀಡುತಿರಲು,

ಅಮಲ ಭಾವನೆಯಲರ ವರ ಸುಮಾಂಜಲಿಗಳನು
ವಿಮಲತರ ತವ ಚರಣಕರ್ಪಿಸುವೆನಿದೊ! ಪೇಳು
ಕಮನೀಯತರ ಕಾಯ! ನೀನಾರು? ನೀನಾರು? ಮನವು ಕಾತರಿಸು-
ತಿಹುದು.

—ಬಿ. ಶ್ರೀಧರ ಕಕ್ಕಿಲ್ಲಾಯ.

# ನೆರಳಿಗೆ

ಮರದ ಛಾಯೆ ಲತೆಯ ನೆರಳು ಸುಖದ ಜೋಡದು!
ಎದೆಗೆ ಮುಸಕೆ ತಂಪ ತಳಿವ ಶಾಂತಿ ನಾಡದು!
ನೆಳಲ ತಂಪ ಬಯಸಿ ಬಂದ
ಪಥಿಕಗೆಂದು ಕರುಣೆಯಿಂದ
ಬಿಸಿಲತಡೆದ ಮರದ ಮುಂದ
ಮುದ್ದು ನೆರಳನು
ಮನದಿ ನೆನೆದು ಹರಸದಿರುವ ಮನುಜನಾವನು?

ವನದ ರಾಣಿ ಜಲದ ದೇವಿ ನೆಳಲ ಸಖಿಯರು
ಗಿರಿಯ ತಟದಿ ಬಯಲ ಬುಡದಿ ಸತತಮೆರೆವರು
ಒಟ್ಟು ಗೂಡಿ ಆಡಿ ಕಲೆತು
ಕುಂದು ಕೊರತೆಗಳನು ಮರೆತು
ಸೊಂಪುಸವಿಗಳೊಡನೆ ಬೆರೆತು
ಸೊಬಗಸುರಿವರು
ಪ್ರೇಮದಿಂದ ಲೊಡಲಗೆಳತಿಗೊಡವೆ ತೊಡುವರು.

ಕಂಡುದನ್ನು ನಂಬಿ ನಂಬಿ ಘಾಸಿಯಾದೆವು
ಆಸೆನುಡಿಯ ಕೇಳಿ ಕೇಳಿ ಮೋಸಹೋದೆವು
ಸಿರಿಯ ಸುಗ್ಗಿ ಪಿಡಿದು ಕೊಂಡು
ಮೆರೆವ ತನಕ ಬಳಗ ದಂಡು;
ಮೆದ್ದುಮುಗಿಯೆ, ಹಕ್ಕಿ ಹಿಂಡ
ತೆರದಿಹಾರುತ
ಹಳಿವರೆಮ್ಮ ಮತ್ತೆ ಮೊದಲ ಮಮತೆ ಮರೆಯುತ.

ಮಾಗಿ ಬರಲು ಕೋಗಿಲೆಗಳ ಕೊರಳು ಬಿಗಿವುದು
ಗಾನವೆಲ್ಲ ನಿಂತುಹೋಗಿ ಮೌನ ಹಿಡಿವುದು
ತರುಗಳೆಲ್ಲ ಶಿರವ ಬಾಗಿ
ತೊರೆಗಳೆಲ್ಲ ನೀರ ನೀಗಿ
ದೇಶದಲ್ಲಿ ಬತ್ತಿಹೋಗಿ
ರೂಪಗೆಡುವುದು
ಬುವಿಯು ಬೇಸಗೆಯಲಿ ದುಃಖದುಡಿಗೆ ತೊಡುವುದು.

ನೆಳಲು ಮಾತ್ರ ನಿಚ್ಚದಂತೆ ರಮ್ಯವಾಗಿದೆ!
ಬಿಸಿಲ ಕಠಿಣ ತಾಪ ತಡೆದು ತಂಪು ಕೊಡುತಿದೆ
ಕಲ್ಪ ಕಲ್ಪ ಉರುಳಿ ಬರಲಿ
ವಿವಿಧ ವಿಧದ ಭೇದವಿರಲಿ
ಪರರಿಗಾಗಿ ನಿಷ್ಠೆಯಲ್ಲಿ
ನಿಂತ ನೆರಳನು
ಮನದಿ ನೆನೆದು ಹರಸದಿರುವ ಮನುಜನಾವನು?

**—ಪೇಜಾವರ ಸದಾಶಿವರಾವ್.**

## ಕನಸಿನೂರು.

ಎಲ್ಲಿ ಹೊತ್ತು ಕಾಣದಿರುವ
ತೊರೆಗಳೆಲ್ಲ ಸೆಳವಿನಿಂದೆ
ಸುಳಿದು ಸೇರುತಿಹವೊ ನೆಲೆಯ-
ದಿರದ ಕಡಲಿಗೆ
ಅಲ್ಲಿ ಸುಖದಿ ಮಲಗಿದವಳ
ನೆಬ್ಬಿಸದಿರಲೇ.

ಮನದ ಬಯಕೆಯುರಸಿಕೊಂಡು-
ತಾರೆಯೊಂದು ದಾರಿ ತೋರೆ-
ದೂರದತ್ತಣಿಂದೆ ಸಾರಿ
ವಿಶ್ರಮಿಸಿಹಳು.
ಮಸಗಿದಾಗಸವನು ನೋಳ್ಪ-
ಳಾಕೆ ನಿದ್ದೆ ಮುಸುಕಿನಲ್ಲಿ ;
ಮೇಲೆ ಸುಳಿವ ಗಬ್ಬಿಲಗಳ
ಸದ್ದ ಕೇಳ್ವಳು.

ನಿದ್ದೆವೋಗುತಿರುವ ಅವಳ
ಮೋರೆ ರಕ್ತರಾಗದಿಂದೆ
ಪೆಂಪಡರ್ದು ಮೆರೆವ ಪಕ್ಕಿ-
ಮಡೆಗಿರ್ಪುದು.
ಕಾಣಳಾಕೆ ಗಿರಿಯ ಬೆಡಗ ;
ಪಚ್ಚೆ ಪೈರ ಹೊಲದ ಸೊಬಗ ;
ಮೈಯ ಮೇಲೆ ಹೊಯ್ಯುತಿರುವ
ಮಳೆಯ ತಿಳಿಯಳು.

ಮಲಗು, ಮಲಗು, ನಿದ್ದೆವೋಗು
ಹಚ್ಚಗೆಸೆವ ಹಾವಸೆಯಲಿ

ಮಲಗು ಹೃದಯ ದೆಲ್ಲೆಯಲ್ಲಿ
ಕಾಲದಂತ್ಯಕೂ ;
ಮರುಕವೆಬ್ಬಿಸದಲೆ ಇರಲಿ ;
ಬೆಳಕು ಕತ್ತಲೊಡೆಯದಿರಲಿ ;
ಮಲಗು ಶಾಂತತೆಯನು ಮುದವು
ವಿನಾರ್ವ ತನಕವೂ.

—ಶ್ರೀ ರಾಜ.

# ಬಿನ್ನಹ

ಮನದಾಗಸದಿ ಮಬ್ಬು ಮುಸುಕಿಹುದು ಮುನ್ನಡೆಯ
ಲೆಸಗೆ ತೋರದು ಹಾದಿ; ತಿಳಿವು ಚುಕ್ಕಿಗಳ
ಮಿಣುಕವೊಂದೇ ಸಾಕು. ಹೇ ದೇವ ಕರುಣಿಪುದು
ಕನಿಕರದಿ ಚಾತಕದೊಲಿಹ ಬಾಲಕನಿಗೆ

ಗಿರಿಯ ಶಿರದೊಳ್ಪುಟ್ಟಿದೊರತೆ ಗರುವವನಿಳುಹಿ
ಹರಿವುದಲ್ಲವೆ ತಳಕೆ ಹಾರಿ ಜಾರಿ?
ಹರಿಯಲೆನ್ನಯ ಹೃದಯ ಪ್ರೇಮದಲಿ ಬೆರೆತು ನೆರೆ
ಕರಗಿ ನೀರಾಗಿ ದೀನರ ದಳಿತರೆಡೆಗೆ

ಕಾರಿರುಳ ಬಡಿದೋಡಿಸುವೆವೆಂಬ ಮಿಂಚುಗಳ
ಪೌರುಷದ ಮಾತೆನಗೆ ಬೇಡ ಬೇಡಾ
ದೂರದಾಗಸದ ತೆರೆಮರೆಯಲ್ಲಿ ಮಿರುಗುತಿಹ
ತಾರಕೆಯ ಮೌನಮುಗ್ಧತೆಯೆನ್ನದಿರಲಿ

ಎನ್ನ ಹೂದೋಟದಲಿ ಕೋಗಿಲೆಯು ಹಾಡುವುದು
ಮುನ್ನ ತೊರೆ ಸಂಗೀತವಾಡಿ ಹರಿಯುವುದು
ಎನ್ನ ಜೀವನದ ಕಿನ್ನರಿಯು ಪ್ರಕೃತೀಗಾನ
ದುನ್ನತಿಗೆ ಜತೆಗೊಳಿಸಿ ಬಾಜಿಸುವುದೈ

—ಕೆ. ರಾಘವಾಚಾರ್.

# ನೈವೇದ್ಯ

ತಿಳಿನೀರ ಕೊಳದಲ್ಲಿ
ತಳಿರುಗಳ ಮರೆಯಲ್ಲಿ
ಎಳನೀರ ತಣ್ಗಂಪಿನೊರತೆಯಲಿ ಕಾಳ್ಪುರದ
ಲಲಿತಸಂಗೀತರವದಲಿ ಪುಷ್ಪಸಂಕುಲದಿ
ನೆಲಸಿರುವೆ ಭಾರತಾಂಬೆ!
ಶಿಲೆಯೊಂದರಲಿ ನಿನ್ನ
ಕಳೆಯನಿರಿಸುವೆನೆಂತು?
ಸುಲಭದಿಂ ಮನವೆಂಬ ಎರಶಿಲ್ಪಿ, ಭಾವನೆಯ
ಶಿಲೆಗಡಿದು ನಿನ್ನ ಮೂರುತಿಯ ನೆಲಸಿಹನಲ್ಲ
ಸಲುವುದೀ ಪಾದಪೂಜೆ!

ಗಿರಿಯ ತಪ್ಪಲುಗಳಲಿ
ಹರಿವ ವಾಹಿನಿಯೊಳಿಹ
ಪರಿಶುದ್ಧವಾದ ಜಲದಿಂದಲಭಿಷೇಕಿಪೆನೆ?
ಪರಿಕಿಸಲು ಮೇಘರಾಜನು ನಿನ್ನ ತಲೆಯ ಮೇ
ಲ್ಸುರಿದ ಜಲವಲ್ತೆ ದೇವಿ!
ಪರಿಶುದ್ಧವಾದೊಡೇಂ?
ಪರರು ತಂದೊಪ್ಪಿಸಿದ
ಪೆರತೊಂದು ವಸ್ತುವಂ ಮರಳಿ ನಿನಗೀವೆನೇ?
ಭರತ ಭೂಮಾತೆ ನುಸ್ಮನದೊಳಿಹ ಸದ್ಭಕ್ತಿ
ಯೊರತೆಯಿಂದಭಿಷೇಕವು!

ಪರಿಪರಿಯ ತರುಲತೆಗ–
ಳುರೆ ಚೆಲ್ವಿನಿಂ ಮೆರೆವ
ವರಕುಸುಮಗಳ ನಿನ್ನ ಪಾದಕಾಣಿಕೆಗೆಂದು
ಧರಿಸಿ ನಿಂದಿಹವೊ ಮೇಣೇನೊ? ನಾನೆಳೆದು, ತವ

ಶಿರದ ಮೇಲಿರಿಸಲೇಕೆ?
ಪರಿಪರಿಯ ಭಾವಗಳ-
ನಿರದೆ ಕಡೆದಾಗ ಹೊರ
ಹೊರಟ ನವವಿಧದ ಸುಧೆಯುಂಡು ಬೆಳೆದೀಕಾವ್ಯ-
ಪರಳಿ ಸುಮವಾಗಿ ಪರಿಮಳಿಸಲೊಡನದು ನಿನ್ನ-
ಶಿರದ ಮೇಲ್ಪುಷ್ಪಾಂಜಲಿ!

ಮರನೇರಿ ರಾಜಿಸುವ
ಸಿರಿವೆತ್ತ ಪಣ್ಗಳ-
ನ್ನರಸಿಕುಯ್ದುವುಗಳ ನಿವೇದಿಪೆನೆ ನಿನ್ನೊಳೇ
ಮೆರೆದಿರ್ಪ ಪಣ್ಣಿನರ್ತಿಯ ಕೆಡಿಸಿ ಮರುಬಾರಿ-
ಚರಣತಲಕರ್ಪಿಸುವೆನೆ?
ಧರೆಯ ನವಯುಗವೆಂಬ-
ಮರದಲ್ಲಿ ಬೆಳೆದಿಂದು
ಮೆರೆವೆನ್ನ ಜೀವನದ ಫಲವೊಂದನೀವೆನಿದ
ಚಿರಕಾಲ ನಿನ್ನ ಪದತಲದೊಳಿರಿಸೌ ಮಾತೆ!
ಇರಲಿ ನೈವೇದ್ಯವಾಗಿ.

—ಕೆಮ್ಮಿಂಜೆ ಸುಬ್ರಾಯುಪಾಧ್ಯಾಯ.

# ಬಯಲಾಸೆ

ಮರವಾಗಬೇಕೆಂಬ ಬಯಕೆಯಿಂದಾನು
ಮಾಮರನ ಕಾಡಿದೆನು "ಗೆಳೆಯ ಹೇಳು
ತೆಂಗು ಕೌಂಗುಗಳಂತೆ ನಿನ್ನಂತೆ ನಾನು
ಹೇಗಾಗಬಲ್ಲೆನೈ ತಿಳಿಯ ಹೇಳು.
ರೆಂಬೆಗಳು ಬದಿಯಲ್ಲಿ
ಎಲೆರಾಶಿ ತಲೆಯಲ್ಲಿ
ಎಂತು ಹುಟ್ಟುವವಯ್ಯ? ಸಾಕು ನರ ಬಾಳು."

ಎಲರಿಂಗೆ ಮಾಮರವು ತಲೆದೂಗಿ ಯೊಮ್ಮೆ
ಚಣಗಾಲ ಮೌನದಿಂ ನೋಡಿ ಎನ್ನ
ಚಿಗುರೆಲೆಯ ಸಂಕುಲವನಲುಗಿಸುತಲೊಮ್ಮೆ
ಮೆಲ್ನುಡಿಯಲಿಂತೆಂದು ಕೇಳಿತೆನ್ನ
"ನರಜನುಮವನು ಬಿಟ್ಟು
ಹಸುರಂಗಿಯನು ತೊಟ್ಟು
ತರುವಾಗ ಲೇತಕ್ಕೆ ಆಶಿಸುವೆಯಣ್ಣ?"

"ಮಾನವನ ಜೀವನವು ಸಾಕು ಸಾಕಾಯ್ತು
ದ್ವೇಷದೂಷಣೆಗಳನು ಕೇಳಿ ನೊಂದೆ
ನರಜನುಮದಲಿ ಎನಗೆ ಬೇಸರಿಕೆಯಾಯ್ತು
ಮರವಾಗೆ ನಾ ನಿನ್ನ ಬಳಿಗೆ ಬಂದೆ
ನರವೇಷವನು ತೊರೆದು
ತರುರೂಪವನು ತಳೆದು
ಬಾಳುವಂತೆನಗೆ ನೀ ದಾರಿ ತೋರೆ"ಂದೆ.

ಇನ್ನೊಮ್ಮೆ ಸುಯ್ಯೆಂದು ಬೀಸಿದುದು ಗಾಳಿ
ಕಾನನದ ಮರಗಳಿಗೆ ಒಸಗೆ ಬಿಡಲು.
ಮುಚ್ಚಿದೆವೆಗಳ ತೆರೆವ ಮುಸ್ನ ವೃಕ್ಷಾಳಿ
ಸಭೆ ಸೇರಿ, ತೋರಿದುದು ಸೊಬಗ ಕೂಡಲು-
ಬಂದಿರುವ ಹುಲುನರನು
ತಮ್ಮವರ ಪಾಳ್ಯವನು
ಸೇರಲಿಹ ಯೋಜನೆಗೆ ಅಭಿಮತವ ಕೊಡಲು.

ಸಾಗರದ ತೆರೆಯಾಗ ದಡವನಪ್ಪಳಿಪ
ಸಪ್ಪಳದ ಗರ್ಜನೆಯು ಕೇಳಿತೆನಗೆ
ನೀಲ ನೆಲಗಳಿಗೆಲ್ಲ ಭಯಬಲವ ತಳಿಪ
ಗಂಭೀರ ಸಂದೇಶ ಬಿತ್ತು ಕಿವಿಗೆ-
"ಐಶ್ವರ್ಯ ವೈಭವದ
ಸಿರಿ ಸೊಬಗು ಸಂಭ್ರಮದ
ತರುವಾಗಲಾರೆ ನೀ ನಡೆ ನರನೆ ಮನೆಗೆ.

"ನೂರು ದಾರಿಗಳನ್ನು ನಡೆದಿಲ್ಲಿ ಬಾರ
ಮರವಾಗಿ ಮೆರೆಯುವುದು ಸುಲಭವಲ್ಲ
ಮೊದಲು ಹುಲ್ಲೆಸಳಾಗಿ ಜನ್ಮನವನು ತಾರ
ಅಜ್ಞನಾಗಿಹ ನರನು ತರುವಾಗಲೊಲ್ಲ!
ಹೊತ್ತಿರುವ ಋಣತೆತ್ತು
ಪುಣ್ಯ ಬೀಜವ ಬಿತ್ತು
ಮತ್ತೆ ಬಾ ನೀನಿತ್ತ ಕೇಳುವವರಿಲ್ಲ!"

**—ಪೇಜಾವರ ಸದಾಶಿವರಾವ್.**

# ಟಿಟ್ಟಿಭ

ಎಲೆಲೆ ! ಟಿಟ್ಟಿಭವೆ !! ನಿನ್ನಾಕಾರ ಟೀಕಾರ
ಎದೆಪಟದಿ ಬರೆವುದಚ್ಚರಿ ಭಯಾಕಾರ
ಗಳಚಿತ್ರ. ಕೆಳುಗಾಲ ಹಕ್ಕಿ ! ತಿಳಿಗಣ್ಣೆ !!
ಅಡವಿಯುರಮನೆಯಲ್ತೆ ನೀನಿಪ್ಪ ತಾಣಂ ?
ದಿನದಾಯು ಮುಗಿಯೆ, ನೇಸರಗಣ್ಣು ಮುಚ್ಚೆ,
ಮುಚ್ಚಂಜೆಯಾಗಸಕೆ ತಾರೆದೀವಿಗೆ ಹಚ್ಚೆ
ಕತ್ತಲೆಯು ಕಳ್ಳಹಜ್ಜೆಯನಿಕ್ಕಿ ಮೈದೋರೆ,
ಕಾಡಿಗರೆದೆಯು ಟೀಕಾರ ಭಯಸೂರೆ-
ಮಾಡೆ, ದುರ್ಮೃಗದ ಬರವನ್ನರಿಪ ಭಾರಿ
ಟೀಕಾರ ಕಹಳೆ ಜನಮನಕೆ ಹಾಹಾಕಾರ
ಮುಗಿಲ್ಮುಸುಕೆ, ನಭವು ಪರಿದಿಳೆಗಿಳಿವುದೆಂಬ
ಮೂಗಗನಸಿಗೆ ಬೆಚ್ಚಿ ಕೋಲುಕಾಲೆತ್ತಿ

.... .... ....

ಮೇಲ್ಮೊಗದಿ ಮಲಗಿ, ಆಗಸವ ಕಾಲಿಂದ
ನಿಲಿಪ ಎದೆತನದ ಮುಗ್ಧನವನೇನೆಂಬೆ !

—ಸ್ವರ್ಗೀಯ ಕೆ. ಟಿ. ಆಚಾರ್ಯ.

# ನೇಹ

ಸಂಜೆವೆಣ್ಣಿನ ಮೊಗದ-ಕೆಂದೇಸಿ ತರುಕುಲದ ।
ಕೆಂಡಳಿರ್ಗಳ ಮೇಲೆ ಬಿಂಬಿಸಿತ್ತು ॥ ಉರೆ-
ರಂಜಿಸಿತ್ತು ॥

ತಂಗಾಳಿಯುದು ಸೀಕ-ರಂಗಳನು ತಳೆದು ತಾ- ।
ಸಂಗಾಂಗಗಳ ಮೇಲೆ ಸೂಸುತಿತ್ತು ॥ ನೆರೆ-
ಬೀಸುತಿತ್ತು ॥

ತಿರೆಯ ಸೊಬಗಿಗೆ ತಲೆಯ-ತೂಗುತಿಹ ಪೇರಳೆಯ ।
ಮರದ ಬುಡದೊಳು, ಕೈಯ ಕೋಲಿಸಿಂದೆ ॥ ಕಡು-
ಬೆಡಗಿಸಿಂದೆ ॥

ಸಿರಿಮೊಗದಿ ನಗುದೆರೆಯು - ಮೆರೆಯುತಿರೆ ಪಣ್ಗೊಯ್ವ ।
ತರುಣಿಯೋರ್ವಳ ಕಾಣುತಲ್ಲೆ ನಿಂತೆ ॥ ನಾ-
ನಚಲಸಂತೆ ॥

ಪೊಂಬಿಸಿಲಿನೆಸಕದಿಂ - ಸಲ್ಪೊಗರನಾಂತು ಸಲೆ ।
ಕಂಗೊಳಿಸುತಿಹ ಬಳ್ಳಿಯಂತೆ ತೋರೆ ॥ ನಾ-
ಬಳಿಯಸಾರೆ ॥

ತುಂಬಿಗಳ್ ತಾವರೆಯ - ಬಸುರೊಳಗೆ ಸೆರೆಸಿಲುಕು- ।
ವಂತೆ ಮನಮವಳೊಡಲನೇ ಸೇರಿತು ॥ ಸೊಗ-
ಗಡಲೇರಿತು ॥

ಚಂದಿರನ ನೋಟದಿಂ - ದಿಂದೀವರಂಗಳೊಲು- ।
ವಿಂದರಳುವಂದದೊಳು, ಲಜ್ಜೆ ತೆರಳೆ ॥ ಎದೆ-
ನೈದಿಲರಳೆ ॥

ಇಂದು ಪೆರರೆಂಬ ಭಾ - ವವನುಳಿದು ನೀನು ನಿ- ।
ನ್ನವಳೆಂದೆಯೋಚಿಸಿಂದೆದೆಯುಸುರಿತು ॥ ನೇಹ-
ರಸ ಮೊಸರಿತು ॥

ಇಂತು ಸಲೆಯುಬ್ಬುತಿಹ - ಬಗೆಪೊಸಲ ತಡೆಹಾಯ್ದು ।
ಮುಂತೆನಿಲದೊಯ್ಯೊಯ್ಯನೆಂತೊ ನಡೆದೆ ॥ ನಾ-
ಧೈರ್ಯಗೆಡದೆ ॥
ಅಂತಾದೊಡೇನವಳ - ಸೋಗೆಗಂಗಳ ಜೋತಿ ।
ಯೆನ್ನೊಡಲ್ಗುಡಿಯೊಳೇ ಬೆಳಗುತಿಹುದು ॥ ನೆರೆ-
ತೊಳಗುತಿಹುದು ॥

—ಯುಸ್. ವೆಂಕಟರಾಜ.

# ಕರ್ಮ

ಜಗದೊಳೆಸಿತೋ ಪಾಪ ಕರ್ಮಂಗಳನ್ನೆಸಗಿ-
ಯುಗಮುಗಿಯುವನಕ ಬದುಕುವ ಬಯಕೆಯೇಕೆ?
ಮುಗಿಲ ಮುಟ್ಟುವ ಕೀರ್ತಿದುಂದುಭಿಯ ಮೊಳಗಿಸುವ
ಪಗಲೊಂದು ಕಳೆಯಲದು ಸಾಲದೇನೈ?
ಇಂದು ಕಳೆಯಿತು ಪುಣ್ಯಕಾರ್ಯಂಗಳಿತಿಹಾಸ-
ದಿಂದ; ಬರಲಿಹ ನಾಳೆಗಾಗಿ ಹಂಬಲವೆ?
ಸಂದಕೀರ್ತಿಯು ಕಜ್ಜವೊಂದೆ ಹೆಬ್ಬೆಳಕಾಗಿ
ಮುಂದೆ ನಿನ್ನಯ ದಾರಿಯನ್ನು ಬೆಳಗಸದೆ?
ಬೆಳಕು ಹುಳವೊಂದು ಮಿನುಗಿತು ; ದಾರಿಗನ ಪಾದ-
ತುಳಿತದಲಿ ಕೊನೆಗಂಡಿತದರ ಬಾಳು.
ಅಳಿಯಲುಂಟೇ ಮಿಂಚುಹುಳದ ಸತ್ಕೀರ್ತಿ? ಕವಿ-
ಗಳು ನಿತ್ಯವದರ ಕೀರ್ತಿಯನು ಹಾಡುವರು.
ಅರುಣೋದಯದೊಳರಳಿ ಪರಿಮಳಿಸಿತೊಂದು ಸುಮ;
ಮರುದಿನದಿ ಹಾಳಾಗಿ ಅಳಿದು ಪೋಯ್ತು
ಅರಲೊಂದು ದಿನದ ಚರಿತೆಯಲಿ ತೊಡಕೆಂದುಂಟೆ?
ಧರೆಗೆ ಕೀರ್ತಿಯ ಪಾಠವನ್ನೀವುದು.
ಧರೆಯ ನಿಯಮವ ಭಂಗಗೊಳಿಸದಿಹ ಕರ್ಮಗಳ
ನಿರತ ನೀನೆಸಗುತಿರು ಮೃತ್ಯು ಬರಲು
ಪರಮ ಸಂತೋಷದಿಂ ಸ್ವೀಕರಿಸು ; ಕರ್ತವ್ಯ-
ನಿರತನೆಂದೇ ಬಾಳು ಲೋಕದಲ್ಲಿ.

—ಕೆಮ್ಮಿಂಜೆ ಸುಬ್ರಾಯಪಾಧ್ಯಾಯ.

---

# ನೆನಹು

ನಲಿಯುತ ಒಲಿಯುತ
ಮನೆಯನು ಬೆಳಗುತ
ಒಲುಮೆಯ ನಿತ್ತಿಹ ಸೋದರಿಯೆ
ನಿನ್ನಯ ಅಗಲಿಕೆ
ವ್ಯಥೆಯನು ಸಹಿಸುತ
ಎಂತಿಹೆನೆಂಬುದ ನಾನರಿಯೆ.

ಕತ್ತಲೆ ಕಡಲಲಿ
ಎನ್ನನು ಕೆಡಹುತ
ಕಾಲನ ತಕ್ಕೆಯ ಸೇರಿದೆಯಾ.
ಜೀವನ ಬಂಧನ
ಮೋಚನೆಗಾಗಿಯೆ
ಸಾವಿನ ಸೇತುವೆ ದಾಟಿದೆಯಾ.

ಗಗನದಿ ಲಾಸ್ಯದ
ನಾಟ್ಯವ ನೆಸಗುವ
ಮುಗಿಲನು ನೆನಪಿಗೆ ತರುತಿರುವೆ ;
ಕರೆಯಲು ನಿನ್ನನು
ನಲಿಯುತ ಬರುತಲಿ
ಮುದ್ದಿಸಿ ಸುಖವನು ಇತ್ತಿರುವೆ.

ಆಟವನಾಡುತ
ಅಡುಗೆಯ ಮಾಡುತ
ಮಣ್ಣಿನ ಮಂಡಿಗೆ ಬಡಿಸಿದ್ದೆ ;
ಪ್ರೇಮದಿ ಮುದ್ದಿನ
ಮಾತುಗಳಾಡುತ
ತರಗೆಲೆಯನ್ನವ ಉಣಿಸಿದ್ದೆ.

ಎದೆಯನು ಕೊರೆಯುವ
ಪ್ರೀತಿಯ ಸೂಸುತ
ಪ್ರೇಮದ ಪಾಶವ ಬಿಗಿದೇಕೆ?
ಬಿಗಿದರು ನಿಲ್ಲದೆ
ಬೇಗನೆ ನಾಕವ
ಸೇರುತ ಶೋಕವ ಕೊಟ್ಟೇಕೆ?

ಕಂಬನಿ ಕಡಲಿನ
ಹೃದಯದ ಹಡಗದಿ
ನಿನ್ನಯ ಪೀಠವ ಮಾಡಿಹೆನು.
ಮುದ್ದಿನ ಭಗಿನಿಯ
ಮರೆಯುವದುಂಟೇ?
ಎನ್ನಯ ಸರ್ವವ ನಿತ್ತಿಹೆನು.

ಮಾತೆಯ ಬಸಿರೊಳು
ಹುಟ್ಟಿದ ಋಣವನು
ಸಲಿಸಿದೆ ತೋರುತ ನಿಜಪ್ರೀತಿ
ಇರುಳಿನ ಬಾನೊಳು
ಕಾಂಬೆನು ಅನುದಿನ
ಸೋದರಿ, ನಿನ್ನಯ ತನುಜೋತಿ.

**—ಉದ್ಯಾವರ ಬಾಲಕೃಷ್ಣರಾವ್.**

## ಮೋತಿಲಾಲರ ನೆನವು

ಭಾರತೀಯರು ಗತಿವಿಹೀನರು
ಘೋರ ಕಷ್ಟದಿ ನಾವು ನರಳುತೆ
ಪಾರಗಾಣದೆ ಮರುಗಿ ಕೂಗುವ ಸಮಯ ಮಧ್ಯದಲಿ
ಕರೆದು ಪ್ರೇಮದಿ ಎಮಗೆ ಬುದ್ಧಿಯ
ನರುಹಿ, ಸತ್ಪಥತೋರಿ, ನಡೆಸದೆ
ತೊರೆದು ನೀ ಹಾ! ಮೋತಿಲಾಲನೆ ಪೋದೆಯಕಟಕಟಾ

ತನಗೆ ಪ್ರಾಯವು ಸಂದುಪೋದುದು;
ತನುವು ಸೇವೆಗೆ ತರವದಿಲ್ಲವು;
ಎನುತ ಭಾರತದಖಿಲಕಾರ್ಯದ ಸರ್ವ ಭಾರವನು
ಜನಿತ 'ಜಯ ಜಯ'ಕಾರ ಮಧ್ಯದಿ
ವಿನುತ ಲವಪುರ ರಾಜ-ಸಭೆಯಲಿ
ತನುಜಗೀಯುತೆ ಧನ್ಯನಾದೆಯೆ ರಾಜವೈಭವದಿ.

ದೇಶಕಾರ್ಯವೆ ತನ್ನ ಧರ್ಮವು,
ದೇಶಪ್ರೇಮವೆ ತನ್ನ ಮರ್ಮವು,
ದೇಶದುದಯವೆ ತನ್ನ ಭಾಗ್ಯೋದಯವು ಎಂದೆನುತೆ,
ದೇಶಸೇವೆಯ ಮಂತ್ರ ಜಪಿಸುತ
ಮೀಸಲಾಗಿಸಿ ಸರ್ವವನು ಮೇಣ್
ದೇಶಯಜ್ಞಕೆ ತನ್ನ ಕಾಯವ ಬಲಿಯನಿತ್ತೆಯಲಾ!

ಕಳೆದುಪೋದುದು ಪ್ರಾಯಕಾಲವು
ಹಳೆಯದಾದುದು ಕಾಯವೆನ್ನುತೆ
ತಳೆದುಬರುತಲಿ ವೀರ್ಯಸಂಪತ್ತರುಣ ದೇಹವನು
ಅಳಿಸುತೊಮ್ಮೆಲೆ ದಾಸ್ಯಕಲೆಯನು
ಅಳವಡಿಸಿ ತಾ ವಿಜಯಭೇರಿಯ
ಮೊಳಗಿ ಕಟ್ಟುವೆನೆಂದು ಒಗೆದೆಯೆ ರಾಮರಾಜ್ಯವನು.

ಕರ್ಮಮಾತ್ರವ ತಾನುಗೈಯಲು
ಧರ್ಮವಿರುವುದು ಜಗದಿ ಮನುಜಗೆ
ಕರ್ಮಫಲವನು ಪಡೆಯಲೆತ್ನಿಪ ಯೋಗತರವಲ್ಲ;
ಕರ್ಮಕಾಗಿಯೆ ಕರ್ಮವೆಸಗುತೆ
ಕರ್ಮಕಾಂಡದಿ ದೈವನಿಯಮದ
ಮರ್ಮಕಿರಣವ ಬೆಳಗಿ ಲೋಕದಿ ಮನುಜಜಂಗುಳಿಗೆ

ತೋರುವೆನು ಪ್ರತ್ಯಕ್ಷವೆನುತಲಿ
ಈರೆರಡು ನಲವತ್ತು ವರುಷದಿ
ಪಾರವಿಲ್ಲದ ರಾಜಕಾರಣ ರಂಗಭೂಮಿಯಲಿ
ಕ್ರೂರದರ್ಪದ ಬೆಡಗ ಝಾಡಿಸಿ
ಧೀರ ಕೇಸರಿಯಂತೆ ಗರ್ಜಿಸಿ
ವೀರಸ್ವರ್ಗವ ಸೇರಿ ನಲಿಸಿದೆ ತನ್ನ ಹರಕೆಯನು.

ಶಾಂತಿಲೋಕಕೆ ತೆರಳಿ ಬೇಗದಿ,
ಶಾಂತಮೂರ್ತಿಯ ಪದವ ಪೂಜಿಸಿ
ಶಾಂತಿ ಸುಖವನು ತರುವೆನೆನ್ನುತ ಮಾತೆ ಭಾರತಿಗೆ
ಅಂತು ದೃಢತೆಯ ಮನದಿ ನೀನೆಲೆ
ಶಾಂತಿಯುದ್ಧದ ನಡುವೆ ತನ್ನಯ
ಶ್ರಾಂತದೇಹಕೆ ವಿರತಿಯಾಗಲಿ ಎನುತ ತೆರಳಿದೆಯಾ.

ನಿನ್ನ ಜ್ಞಾನದ ವಿಮಲಕಾಂತಿಯು
ನಿನ್ನ ಧೈರ್ಯದ ಪರಮ ಸ್ಫೂರ್ತಿಯು
ನಿನ್ನ ಚಾಗದ ಕೀರ್ತಿಯದ್ಭುತ ಪ್ರೇಮ ಸಂಪದವು
ನಿನ್ನ ನಿಶ್ಚಿತ ಧ್ಯೇಯ ಕಿರಣವು
ಚೆನ್ನಿನೆಮ್ಮಯ ಹೃದಯ ತಲದಲಿ
ಇನ್ನು ಕೂಡುತ ಬೆಳಗಿ ನಾಡಿಗೆ ತರಲಿ ತೇಜವನು!

—ಹಿರಣ್ಮಯ.

# ನಿನ್ನಲ್ಲಿ

ನಿನ್ನಲ್ಲಿ ಮುಂಜಾನೆ ಹೊಂಪುಳಿಯನಿಚ್ಛಿಪೆನು.
ನಿನ್ನಲ್ಲಿ ಸಂಜೆ ಹೊಂಜೆರಗನಾಶಿಪೆ, ನೀರೆ!
ನಿನ್ನಲ್ಲಿ ವಿವಿಧ ತಾರಾಪುಂಜದೊಳ ಚೆಲುವ
ಬಣ್ಣಿಪೆನು. ಜೋಸ್ನದಾನಂದವನು ಹರಡಿಪೆನು!

ನಿನ್ನ ಮೋಹನ ಸುಗ್ಗಿಯಲಿ ಬಗೆಬಗೆಯ ರುಚಿಗ–
ಳನ್ನೀವ ಫಲಪುಷ್ಪಗಳ ತಳಿರಿಸುವೆ, ದೇವಿ!
ನಿನ್ನ ಸೌಂದರ್ಯರಸದಲ್ಲಿ ಹಲ ಬಣ್ಣಂಗ-
ಳನ್ನಿತ್ತು ಸೃಷ್ಟಿಸೊಬಗನು ಬರೆದು ಸವಿಗೊಂಬೆ.

ನಡೆಗೆ ನುಡಿ, ನುಡಿಗೊಂದು ನೋಟ, ನೋಟಕೆ ಅಡಿಯು
ಅಡಿಗೆ ಅಧರಗಳೊಂದು ಮುಗುಳುನಗೆ ಸುಹಾಸಲಿರೆ
ಕುಡಿಯಿಡುವ ಲಜ್ಜೆತಳಿರುಗಳು, ಬಲುಸೊಂಪಾದ
ದುಡುಕು ಮೆಲ್ಲಲರುಡಿಗೆ, ಬೆಡಗು ಚುಂಬನಗಳಿವು!

ಜೀವನದ ಮರಸೇರಿ ಕಳಿತ ತವ ಪ್ರೇಮಫಲ
ಮೀವ ಸವಿಗಂಪ ಸೊಬಗನು ಕಾಣದಿಹರಿಲ್ಲ.
ಆವನಾದರು ನಿಂದರೆಟಕಲಿಲ್ಲವು. ಸೆಳಲೊ-
ಳಾವಗಂ ಮನವು ತಂಪಿಂ ಶಾಂತಿಗೊಂಡಿಹುದು!

—ಶ್ರೀನಿವಾಸರಾವ್, ಕದಿರೆ.

## ಕರೆ

ತಿಳಿಯ ತಿಂಗಳ ಬೆಳಕಿನಲ್ಲಿ
ಬಳಿಯ ಮರದಾ ನೆರಳಿನಲ್ಲಿ
ಕೊಳನ ತೀರದ ಕಲ್ಲಿನಲ್ಲಿ
ನಲಿವ ಸೆರಗನು ಕೆಲಕೆ ಚೆಲ್ಲಿ
ಚೆಲುವೆ ನಗುವಳು ಮೋದದಿ !

ಹಾವ ಭಾವದ ಬೆಡಗ ಬೀರಿ
ನಗೆಯ ಬೆಳಗಿನ ಸೊಗವ ತೋರಿ
ಒನಪಿನೇಣಿಯ ತುದಿಯನೇರಿ
ಗಾನ ಗೈಯುತ ಹೊಂತ ಹಾರಿ
ಬೆಳಗುತಿರುವಳು ಬುವಿಯನು !

ವಾಮಹಸ್ತವ ಕಟಿಯೊಳಿಟ್ಟು
ಬಲದ ಕೈಯನು ಸಡಿಲು ಬಿಟ್ಟು
ಉಂಗುಟದಿ ನೆಲವಾಂಕಿ ಗೀರಿ
ಲಜ್ಜೆಯುಲ್ಲಾ ಬಿಂಕದೋರಿ
ಕರೆಯುತಿರುವಳು ಹರುಷದಿ !

ಕಾಮಿನಿಯು ಯಾಮಿನಿಯೊಳಿಂತು
ಕರೆವಳಾರನೊ ತಿಳಿಯಲೆಂತು ?
ತಿಳಿವ ಬಿಗಿದುದು ನೇಹ ತಂತು
ತರುಣಿ ಮಣಿಯಾ ಗಿಣಿಯನೋತು
ಮನದ ಪಂಜರ ತೆರೆಯಿತು !

ಚೆಲ್ವಿನಧರಕೆ ಪ್ರೇಮವೆಂಬ
ಮುದ್ರೆಯೊತ್ತುತ ಸೊಗವು ಗಾಂಬ

ಉಬ್ಬಿದೆದೆಯನು ಬಿಗಿಯುತಪ್ಪಿ
ಸುಖಿಪ ಕಾಲವು ಬಂದುದೊಪ್ಪಿ
ಎಂದು ಬಗೆದೆನು ಮನದೊಳು.

ಬಾಲೆ, ಮುಕುರ ಕಪೋಲೆ, ಗಾನ-
ಲೋಲೆಯೊಬ್ಬಳೆ ನಿಂತಿದೇನ
ಯೋಚಿಸುವೆ? ನಿನ್ನೆಡೆಗೆ ಬರಲು
ಆಶಿಸಿಹೆ, ನೀನೆನಗೆ ಬದಲು
ನುಡಿಯ ನುಡಿಯದಿರೆಂದೆನು.

ಒಪ್ಪಿದೂಗಿದಳವಳು ಶಿರವ
ತೋರಿದಳು ಮಧುರಾಂಗಿ ನಲವ
ತೂರಿದಳು ಬಲ್ಲೆಗೆಯ ಹೂವ
ಎನ್ನ ಕರೆಯಲು ಚಾಚಿ ಕರವ
ಮೋಹ ಶರವನ್ನೆಸೆದಳು!

ರಾಗದಿಂದಲಿ ಪಿಡಿಯಲವಳ
ಬಳಿಯನೈದಲ್ಕಾಗ ತರಳೆ
ಅಡಿಯನಿಟ್ಟಳು ಹಿಂದೆ ಹಿಂದೆ-
ಮುದದಿ ನುಗ್ಗಲು ನಾನು ಮುಂದೆ
ಕಾಣದಾದಳು ಕಣ್ಣಿಗೆ!

ಓರೆನೋಟವ ಬೀರುತಿಂತು
ಮೊಗದ ಮೇಲ್ಗಡೆ ತೃಪ್ತಿಯಾಂತು
ಮಂದ ಹಾಸದಿ ನಗುತ ನಿಂತು
ಆಸೆ ಬಲೆಯನು ಬೀಸುತಿಂತು
ಕರೆದು ಸಾರಿದಳೆಲ್ಲಿಗೆ?

—ಬಾಲಮಿತ್ರ.

# ಅಳಿವು

ತಳತಳನೆ ಆಗಸದ ಕೊರಳಿನಲಿ ಬೆಳಗುತಿರೆ
ಕಳಚಿ ಬಿದ್ದುದದೆಂತು ತಿಂಗಳೆಂದು
ಕಳವಳಿಸೆ, ತಾರೆಗಳು ಕಣ್ಣಮಿಟುಕುತ ಪೇಳ್ದ
ವಳಿವಿನಮವಾಸೆಯದನೆಳೆಯಿತೆಂದು

ಮೊಳಗುತ್ತಿದ್ದುವು ವಾದ್ಯ ನೆರೆಮನೆಯೊಳಗೆ ನಿನ್ನೆ ;
ಅಳು ಕೇಳಿಸುವುದಿಂದು ವಧುವು; ಗೋಳಿಡುತೆ
ಕೇಳುವಳು "ಎನ್ನೊಡೆಯ 'ವಧು' ಬಿರುದನೆಳೆದೊಯ್ದು
ಪೇಳ 'ವಿಧವೆ' ಯ ನಿತ್ತುದೇಕೆ ?" ಎಂದು

ನಳಿತೋಳ್ಗಳನ್ನೆತ್ತಿ, ಬೆಳ್ನಗೆಯ ಬೀರಿ, ತೊದ-
ಲುಲಿಯಾಡಿ ಲೀಲೆಯಲಿ ನಲಿಯುತಿದ್ದ
ಚೆಲುವಿನಾಗರದ ಮಗು ತೊಟ್ಟಿಲಲಿ ಕಣ್ಮುಚ್ಚಿ
ಮಲಗುತಿಹುದಂತೆ ಉಸಿರಿಲ್ಲವಂತೆ !

ಎಲರಿನಲಿ ಮೆಯ್ಯೊಡ್ಡಿ ಬಾಗಿ ಬಳುಕುತಲಿದ್ದ
ಅಲರಿಲ್ಲ, ಅಳಿಬಳಗವಿಲ್ಲ, ಆರಿಲ್ಲ !
ಸುಳಿಗಾಳಿ ಸುಯ್ಯೆಂಬ ನಿಡುಸುಯ್ಯ ಬಿಡುತಿಹುದು
ಅಲೆದಾಡುತಿಹುದಲ್ಲಿ ವಿರಹತಾಪದಲಿ.

ಬಾಲೆಯರ ನಿಟ್ಟುಸಿರು, ಪಾಲಕರ ಕಂಬನಿಯು
ಗೋಳು, ನಿನ್ನಯ ಕಿವಿಗೆ ಕೇಳದಿಹುದೇ ?
ಬಾಳುವೆಯ ಲತೆಯ ಕುಡಿ ಕತ್ತರಿಸಿ ಕೆಡಹುತ್ತೆ
ಹಾಳುಮಾಡುವೆ ಅಳಿವೆ ಮಾತ್ಸರ್ಯದಳಿವೆ !

ಸಿನಗಿಸಿತು ಲೋಗರಂಜುವ ಕತದಿ ಬಲುಹೆಮ್ಮೆ
ಮನದೊಳುದಿಸಿಹುದು. ಎನ್ನಳಿವೆ ಕೇಳ
ದಿಸಮುಗಿಯೆ ಮುಚ್ಚುಂಜೆಯಾಗಸದ ಮರೆಯಿಂದ
ಕುಣಿದು ಬಹ ತಾರೆಯುಂತಾನು ಬರುವೆ!

—ಕೆ. ರಾಘವಾಚಾರ್.

# ತೊರೆ

ಬೆಟ್ಟದ ಸೀಮೆಯ ನೋಡದ ಮಾಯೆಯು
ಮುಸುಕಿರೆ ಲೀಲೆಯೊಳದರೊಳಗೆ
ಮಿಂಚಿನ ಲೇಖೆಯ ತೆರದಲಿ ಹೊಳೆಯುತ
ಗಿರಿಯೆದೆಯಿಂದಂ ನಾನಿಳಿದೆ.

ಚಿಕ್ಕವಳಾಗಿರೆ, ಬೀಳುತ ಏಳುತ
ಬಂದೆನು ಗಿರಿಜರ ಕಣಿವೆಯೊಳು.
ಅಂದಿನ ದಿನಗಳ ಹಿಂದಕೆ ಕರೆಯೆ
ಅಚ್ಚರಿಯೆನಿಪುದು ಮನದೊಳಗೆ!

ಎಂದೂ ನೋಡದ ಮಾರ್ಗದಿ ಸಾಹಸ
ದಿಂದಡಿಯಿಡುವಾ ಕಾಂಕ್ಷೆಯಲಿ
ಹುಡುಕುತ ಹಾದಿಯ ಸುಳಿಯುತ ಕಾಡೊಳು
ಮೊರೆಯುತ ಹರಿದೆನು ಭೋರ್ಗರೆದು.

ಹಸುರಲಿ ಮೇಯುವ ಹುಲ್ಲೆಯು ಕಿಪಿಗಳ-
ನಗಲಿಸಿ ನಲಿಯುತ ಬಳಿಗೈದಿ
ಚಂಚಲ ನೋಟದಿ ಸ್ವಾಗತವೀಯುತ
ಚಂಗನೆ ನೆಗೆಯಿತು ಸೊಬಗಿನಲಿ!

ಹೊನಲಿನ ಸೆಳತಕೆ ಸಿಲುಕಿದ ಲತೆಗಳು
ಶರಣೆಂದವು ತಲೆವಾಗುತಲಿ ;
ಅಲರಿನ ಕೊನರಿನ ಪರಿಮಳವಿತ್ತವು

ಮಂಜುಳಗಾನವ ಲಹರಿಯೊಳುಲಿಯುತ
ಕುಸುಮದ ಮಾಲೆಯ ಪೋಣಿಸುತ
ಇನಿಯನ ಮೋಹದಿ ಕರೆಯುವ ರಮಣಿಯ
ತೆರದಲಿ ನಾಡನು ಸೇರಿದೆನು.

ಬೆಂದಿಹ ಭೂಮಿಗೆ ತಂಪನು ಕೊಡುತಾ
ಕಳೆದೆನು ಲೋಕದ ನೀರಡಿಕೆ;
ಲೋಕಕೆ ಅನ್ನವನೀಯುವ ಕಾರ್ಯಕೆ
ನಾನೆರವಾಗುತ ಬಡವಾದೆ.

ಬತ್ತದ ಎಳೆತೆನೆ ಎನ್ನಯ ಹಾಲನು
ಹೀರ್ವುದು; ತನಿರಸ ಸೀಗಬ್ಬು;
ಹೂಗಳು ಜೇನನು, ತೆಂಗೆಳನೀರನು,
ಬೇಡುತ ಕೊಂಬವು ನನ್ನಿಂದಾ.

ಕೊಡುವುದೆ ಇಹದಲಿ ಚಾಗಿಗೆ ಧರ್ಮವು
ಎನ್ನುತ ನನ್ನನು ನಾಕೊಟ್ಟೆ.
ನಾಡಿನ ಕೊಳೆಯನು ಸೇವಕನಂತೆಯೆ
ತೊಳೆದೆನು ಗೌರವಕಾಶಿಸದೆ.

ಇಲ್ಲಿಯೆ ನಾನೆಲೆ ನಿಲ್ವುದು ಸಲ್ಲದು
ತೊರೆಯಲು ಒಲ್ಲೆನು ಎಲ್ಲರನು.
ಸುಖವನು ಗಣಿಸದೆ ಕಡಲನು ಸೇರುತ
ಕೊಡುವೆನು ಮುಂದಕೆ ಸಲಿಲವನು.

—ಬಜ್ಜಾಲು ಸಂಜೀವಶೆಟ್ಟಿ.

## ದೇವಾ ! ನೀನು

ವರಪ್ರಕೃತಿಯೆಂಬ ನಳಿನದ ಗರ್ಭದೊಳಗವಿತ
ಸರಸ ಮಕರಂದವಾದರೆ ತುಂಬಿಯಂತೆ,
ನೆರೆ ಸುಳಿದು ನಿನ್ನ ಜಪಝೇಂಕಾರದಲಿ ನಿನ್ನ
ಇರವ ಸೇರಲೆ? ಬಳಿಕ ಭಕ್ತಿಯಿಂದಿರುವೆ !

ನಿನ್ನ ಕರುಣಾಮೃತವ ಪಾನಮಾಡುವ ಸಮಯ-
ವೆನ್ನಾತ್ಮವೇಕಾಗ್ರ ಚಿತ್ತತೆಯೊಳಿರಲು
ಬನ್ನ ಪಟ್ಟಿಹ ಪ್ರಕೃತಿ ಮೋರೆ ಮುಚ್ಚಲು, ಮೋಕ್ಷ-
ವನ್ನೆ ಹೊಂದುವೆ ಸಂಜೆ ತುಂಬಿಯಂತೆ!

ಆಕಾಶ ಮಂಟಪದಿ ತೂಗುತಿಹ ತಾರೆಯೆಂ
ಬಾ ಕುಸುಮ ನೀನಾದೊಡಾನು ಜಲದಂತೆ,
ಸುಮಲತೆಗೆ ನೆರೆದಂತೆ ನಿನ್ನಡಿಯ ಸೇವೆ-
ಯಂ ಕೊಂಡು ಮೇಲೇರಿ ಕುಸುಮರಸವೆನಲೆ?

ಹುಡುಕಿ ಬಳಲುವೆನೇಕೆ? ಮಿಂಚು ಹುಳವಾಗಿ ತ-
ನ್ನಡಿಯ ಬಿಂಬವನರಿವೆ. ಸೊಡರಿಗರಿವುಂಟೆ?
ಗಿಡುಗವಿದು ಸುಳಿದಾಡಿ ಸೋತು ಮನದೊಳೆ ನಿನ್ನ
ಪಡೆದಿರುವೆನೆಂದುಲಿವ ತೃಪ್ತಿಯಿದೆ, ದೇವಾ !

**—ಶ್ರೀನಿವಾಸರಾವ್, ಕದಿರೆ.**